हरिः ॐ

ಶ್ರೀಮಜ್ಜಗನ್ನಾಥದಾಸಾರ್ಯರ

ಪರಮ ಪ್ರಿಯ ಶಿಷ್ಯರೂ ಅಪರೋಕ್ಷಜ್ಞಾನಿಗಳೂ ಆದ

ಶ್ರೀಪ್ರಾಣೇಶ ವಿಠಲ ವಿರಚಿತ

ಶ್ರೀ ಹರಿಕೀರ್ತನಮಾಲಾ ಪಂಚಮ ಪುಷ್ಪ.



# ಶ್ರೀಪ್ರಾಣೇಶ ವಿಠಲರ ಕೀರ್ತನಗಳು

ಮತ್ತು

ಶ್ರೀಗುರುಪ್ರಾಣೇಶ, ಶ್ರೀಶಪ್ರಾಣೇಶ ವಿಠಲರ

ಕೀರ್ತನಗಳೂ ಶ್ರೀವರದೇಂದ್ರ ಸ್ವಾಮಿಗಳವರ

ಸ್ವಪ್ನವೃಂದಾವನಾಖ್ಯಾನವೂ.

(ಶಕ ೧೮೪೮)



Price: 1-8-0.] [ಕ್ರಯ: ರೂ. ೧॥.

हरि: ॐ

ಶ್ರೀ ಹರಯೇ ನಮಃ

ಶ್ರೀ ಮಾತರಿಶ್ವಾಯ ನಮಃ

ಶ್ರೀ ರಾಘವೇಂದ್ರವರದೇಂದ್ರ ಗುರುಭ್ಯೋ ನಮಃ

नैवात्मनः प्रभुरयं निजलाभपूर्णो मानं जनाद्‌विदुषः करुणो वृणीते ॥
यद्यज्जनो भगवते विद धीतमानं तच्चात्मने प्रतिमुखस्य यथा मुखश्रीः ॥

# ಉಪೋದ್ಘಾತ.

ಶ್ರೀ ಹರಿಕೀರ್ತನಮಾಲೆಯ ಈ ಪಂಚಮ ಪುಷ್ಪವನ್ನು
ಪಂಚರೂಪಾತ್ಮಕನ ಪಾದಗಳಿಗರ್ಪಿಸಿ ಪ್ರಕಟಿಸುವೆನು.

ಹರಿದಾಸ ಕುಲೋತ್ತಂಸರಾದ ಶ್ರೀಪ್ರಾಣೇಶ ದಾಸಾರ್ಯರಿಂದ ವಿರಚಿತವಾದ ಈ ಕೀರ್ತನಗಳ ಪುಸ್ತಕವು ಮುದ್ರಿತವಾಗಿ ಎಷ್ಟೋ ದಿವಸಗಳಾಗುತಿದ್ದವು. ಆದರೆ ಕೆಳಗೆ ಬರೆದ ಕೆಲವೊಂದು ಅನಿವಾರ್ಯ ಕಾರಣಗಳ ಮೂಲಕ ಮುದ್ರಿಸುವ ಕಾರ್ಯವು ನಿಂತುಹೋಯಿತು.

(೧) ಮೂಲಪ್ರತಿಯ ಮೇಲಿಂದ ಈ ಪದಗಳನ್ನು ಬರೆದು ಮುದ್ರಣ ಮಾಡಿಸುವದಕ್ಕಾಗಿ, ಮ। ರಾ। ರಾ। ಪಾವಂಜೆ ಗುರುರಾವ ಮಧ್ವಸಿದ್ಧಾಂತ ಗ್ರಂಥಾಲಯ ಉಡುಪಿ, ಇವರು ವಚನವನ್ನಿತ್ತು ಸಹಾನುಭೂತಿಯನ್ನು ಪ್ರಕಟಮಾಡಿದ್ದರಿಂದ, ಈ ಪುಸ್ತಕವು ಮುದ್ರಣಗೋಸುಗ ಅವರ ಕಡಿಗೆ ಶಕೆ ೧೮೩೭ ನಿಜವೈಶಾಖ ಶು ।. ೧೦ ದಿವಸ ಕಳುಹಿಸಲ್ಪಟ್ಟಿತು. ಅದೇ ವರ್ಷ ನಾನು ಪರ್ಯಾಯೋತ್ಸವಕ್ಕೆಂದು ಶ್ರೀ ಉಡುಪಿ ಕ್ಷೇತ್ರಕ್ಕೆ ಹೋಗಲು, ಮ। ರಾ। ಪಾವಂಜೆ ಗುರುರಾಯರ ಭೇಟಿಯಾಗಿ, ಮುದ್ರಣ ವಿಷಯವಾಗಿ ಕೆಲವು ಮಾತುಕಥೆಗಳು ನಡೆದವು. ಆಗ್ಗೆ ಅವರು: "ಈ ಪುಸ್ತಕದ

ಪ್ರತಿಗಳು ತೀವ್ರ ಖರ್ಚಾಗುವದಿಲ್ಲವಾದ ಕಾರಣ ನೀವು ನಾಲ್ಕು ನೂರು ರೂಪಾಯಿಗಳು ಕೊಟ್ಟಲ್ಲಿ ಮುದ್ರಿಸಿ ೧೦೦ ಪ್ರತಿಗಳನ್ನು ನಿಮಗೆ ಕೊಟ್ಟು, ಸಕಲ ಸ್ವಾತಂತ್ರ್ಯವನ್ನು ನಮ್ಮ ಕಡಿಗೆ ಇಟ್ಟುಕೊಳ್ಳುವೆವು" ಎಂದು ಹೇಳಿದರು. ಆಗ್ಗೆ ಶ್ರೀಮನ್ನಾರಾಯಣ ಒಕ್ಕಲರಾದ ನಮ್ಮಿಂದ ಅಷ್ಟು ರೂಪಾಯಿಗಳು ಕೊಡಲಿಕ್ಕಾಗದ್ದರಿಂದ ಆವರು ಪುಸ್ತಕವನ್ನು ತಿರುಗಿ ಕೊಟ್ಟರು

(೨) ಇಷ್ಟರಲ್ಲಿಯೇ ನಮ್ಮ ಇಷ್ಟ ಜನರೆಲ್ಲರೊಂದಾಗಿ — ಈ ಕೀರ್ತನಗಳನ್ನು ಅಚ್ಚು ಹಾಕಿಸಿದರೆ ಇದರಲ್ಲಿದ್ದ ಸಾನ್ನಿಧ್ಯವು ಕಡಿಮೆಯಾಗಿ, ಜನರು ಅಶ್ರದ್ಧೆಯಿಂದ ಅಚ್ಚಾದ ಪುಸ್ತಕಗಳನ್ನು ಅಲ್ಲಲ್ಲಿ ಒಗೆಯುವರೆಂದೂ, ಕಂಡ ಕಂಡ ಹಾಗೆ ಅರ್ಥವನ್ನು ಕಲ್ಪಿಸಿ ಅವಿಶ್ವಾಸವನ್ನುಂಟುಮಾಡಲಿಕ್ಕೆ ಕಾರಣರಾಗುವರೆಂದೂ, ಹೇಳಿದ ಕಾರಣ ಅವರ ಅಭಿಪ್ರಾಯವನ್ನನುಸರಿಸಿ, ದ್ರವ್ಯಾನುಕೂಲವಿದ್ದರೂ ಕೆಲಸವನ್ನು ನಿಲ್ಲಿಸಿ, ಅನೇಕ ಮಹನೀಯರನ್ನು ಈ ವಿಷಯವಾಗಿ ವಿಚಾರಿಸುತ್ತಿರಲು, ಕೆಲವರು ಹೇಳಿದ್ದೇನಂದರೆ:— ಅಕ್ಷರರೂಪವಾದ ಈ ಪದಪದ್ಯಗಳ ಪುಸ್ತಕಗಳನ್ನು ಅಶ್ರದ್ಧೆಯಿಂದ ಒಗೆದರೆ ಆ ಕೀರ್ತನೆಗಳಲ್ಲಿದ್ದ ಸಾನ್ನಿಧ್ಯವು ಎಂದೂ ಹೋಗಲಾರದು ಹೇಗೆಂದರೆ: "**अर्चकस्यतपो बलात्**" ಎಂಬ ಉಕ್ತಿಯಂತೆ ಅರ್ಚಕನಲ್ಲಿದ್ದ ತಪೋಬಲದ ಪ್ರಮಾಣದಿಂದ ಪ್ರತಿಮೆಯಲ್ಲಿದ್ದ ಸಾನ್ನಿಧ್ಯವು ಹೆಚ್ಚು ಕಡಿಮೆಯಾಗುವದು; ಆದರೆ ಅರ್ಚಕನಲ್ಲಿಯ ತಪೋಬಲಾಭಾವದಿಂದ ಸಾನ್ನಿಧ್ಯವು ಮಾತ್ರ ಎಂದೂ ಹೋಗಲಾರದು ಮತ್ತೂ ರತ್ನದ ಬೆಲೆಯನ್ನರಿಯದ ಮೂಢನು, ಅದಕ್ಕೆ ಕಾಜು ಎಂದು ಭಾವಿಸಿ, ಅದನ್ನು ಉದಾಸೀನದಿಂದ ಎಲ್ಲಾದರೂ ಒಗೆದರೆ, ಆ ರತ್ನದ ಪ್ರಕಾಶವು ಹೇಗೆ ಕಡಿಮೆಯಾಗದಿರುವದೋ, ಹಾಗೆಯೆ ಪ್ರತಿಮಾ, ಮತ್ತು ರತ್ನೋಪಮವಾದ ಈ ದಿವ್ಯ ಕೀರ್ತನೆಗಳಲ್ಲಿದ್ದ ಸಾನ್ನಿಧ್ಯವು ಹೋಗಲಾರದು.

ಮತ್ತು ಕುಹಕರ ನಿಂದಾರೂಪ ವಾಕ್ಯಗಳಿಂದ ಆ ಮಹನೀಯರಿಗೆ ಯಾವ ವಿಧದಿಂದಲೂ ಕುಂದುಬರಲಾರದು. ಇಂಥ ಜನರ ಸ್ಥಿತಿಯನ್ನು ಶ್ರೀಮಜ್ಜಗನ್ನಾಥ ದಾಸಾರ್ಯರು ಅಪೂರ್ವವಾದ ಶ್ರೀ ಹರಿಕಥಾಮೃತ ಸಾರ ಗ್ರಂಥದಲ್ಲಿ—

"ಭಾಸ್ಕರನ ಮಂಡಲವ ಕಂಡು ನಮಸ್ಕರಿಸಿ ಮೋದಿಸದೆ
ದ್ವೇಷದಿ, ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ"

ಎಂಬುವ ಶ್ಲೋಕದಿಂದ ಯಥಾರ್ಥವಾಗಿ ವರ್ಣಿಸಿರುವರು. ಇತ್ಯಾದಿ ಸಮಾಧಾನಗಳಿಂದ ಬಂದ ಶಂಕೆಗಳೆಲ್ಲವೂ ದೂರಾಗಿ ಪುನಃ ಅಚ್ಚು ಹಾಕಿಸ ಲಿಕ್ಕೆ ಪ್ರಯತ್ನವು ನಡೆಯಲಾರಂಭಿಸಿತು

(೩) ಈ ಅವಧಿಯಲ್ಲಿ ಅಚ್ಚು ಹಾಕಿಸುವ ಮಹಾ ಕಾರ್ಯವನ್ನು ಸಂಪೂರ್ಣವಾಗಿ ವಹಿಸಿದವರೂ, ನನ್ನ ಭಾವಮೈದುನರೂ ಆದ ಶ್ರೀಯುತ ಸ್ವಾಮಿರಾವ ವಕೀಲ ಕಲೂರ, ಇವರು ಶಕೆ ೧೮೪೦ ಆಶ್ವೀನ ಶು। ೩ ದಿವಸ ಪರಲೋಕಯಾತ್ರೆಯನ್ನು ಮಾಡಿದ ಕಾರಣ ಈ ವಿಚಾರವು ಅಲ್ಲಿಗೇ ನಿಂತುಹೋಯಿತೆಂದು ಬರೆಯಲು ಅತ್ಯಂತ ವಿಷಾದವಾಗುತ್ತದೆ. ಇವರು ಶ್ರೀಗುರುಪ್ರಾಣೇಶ ದಾಸಾರ್ಯರ ದೌಹಿತ್ರ ಪುತ್ರರು, ಚಿಕ್ಕಂದಿನಲ್ಲಿಯೇ ಒಳ್ಳೇ ಸುಶೀಲರಾಗಿದ್ದು ಬಹು ಕಷ್ಟದಿಂದ ವಿದ್ಯಾರ್ಜನೆಯನ್ನು ಮಾಡಿ, ಅನೇಕ ಲೌಕಿಕ ಮಹಾ ಕಾರ್ಯಗಳಲ್ಲಿ ಪ್ರಖ್ಯಾತಿಯನ್ನು ಪಡೆದರು. ಇದ ಲ್ಲದೆ ಪೂರ್ವಾರ್ಜಿತ ಸುಕೃತದಿಂದ ಬಾಲ್ಯದಲ್ಲಿಯೇ ಅವರ ಮನಸ್ಸಿನ ಮೇಲೆ ಪರಮಾರ್ಥದ ಸಂಸ್ಕಾರವಾದ್ದರಿಂದ ಸರ್ವದಾ ಅದೇ ವಿಚಾರ ದಲ್ಲಿಯೇ ಮಗ್ನರಾಗಿರುತಿದ್ದರು ಶ್ರೀ ಮಹಾ ಯಾತ್ರಾದಿಗಳನ್ನು ಮಾಡಿ ಕೊಂಡು ಬಂದ ಮೇಲೆ ಇವರಿಗೆ ಬಹು ಜಾಡ್ಯವಾಗಲು, ಶ್ರೀ ಮುಂಡೇ ವಾಡಿ ದಾಸಾರ್ಯರ ಅನುಗ್ರಹದಿಂದ ಜಾಡ್ಯವು ಗುಣಮುಖವಾಗಹತ್ತಿತು. ಅದೇ ಅಸ್ವಸ್ಥತೆಯಲ್ಲಿಯೇ ಅನೇಕ ವಿಧವಾಗಿ ದೇವರ ಸ್ತೋತ್ರಗಳನ್ನು ಪದ್ಯ ರೂಪವಾಗಿ ಮಾಡಲು ಇವರಿಗೆ ಪೂರ್ಣ ಆರೋಗ್ಯವಾಯಿತು ಕೆಲವು ದಿವಸಗಳ ಮೇಲೆ ಶ್ರೀ ವರದೇಂದ್ರ ಸ್ವಾಮಿಗಳವರ ಅನುಗ್ರಹದಿಂದ ಅವರ ಆಜ್ಞಾ ಪ್ರಕಾರವೇ ಶ್ರೀ ಗೋಪಾಲ ದಾಸಾರ್ಯರ ಶಿಷ್ಯ ಸಂತತಿಗೆ ಸೇರಿದ ಜ್ಞಾನಿಗಳಾದ ಗುರುಜಗನ್ನಾಥ ವಿಠಲರಲ್ಲಿ "ವರದೇಶ ವಿಠಲ" ಎಂಬುವ ಅಂಕಿತವನ್ನು ಸಂಪಾದಿಸಿ, ಅತ್ಯುತ್ತಮವಾದ ಅನೇಕ ಪದಪದ್ಯಗಳನ್ನೂ, ವರದೇಂದ್ರ ಸ್ವಾಮಿಗಳು ಪುಣೆಯಿಂದ ಲಿಂಗಸೂಗೂರಿಗೆ ಸ್ವಪ್ನದಿಂದ ಬಂದ ಆಖ್ಯಾನವನ್ನೂ, ಮನೋಹರವಾದ ಪದಪದ್ಯಗಳಿಂದ ಯುಕ್ತವಾದ ಶ್ರೀ

ಮದ್ಭಾಗವತ ಸಪ್ತಮಸ್ಕಂಧಾಂತರ್ಗತ ಶ್ರೀ ಪ್ರಲ್ಹಾದ ಚರಿತ್ರೆಯನ್ನೂ, ಮತ್ತೂ ಮಂತ್ರಾಲಯ ಗುರುರಾಜರ ಒಂದು ಚಮತ್ಕಾರಿಕ ಆಖ್ಯಾನವನ್ನೂ ರಚಿಸಿ, ಒಳ್ಳೇ ಜ್ಞಾನವನ್ನು ಸಂಪಾದಿಸಿ ಗುರ್ವನುಗ್ರಹಕ್ಕೆ ಪಾತ್ರರಾದರು. ಇಂತಹ ಸುಶೀಲರೂ ಜ್ಞಾನಿಗಳೂ ಯಾತ್ರಾಮಾಡಿದ ತರುವಾಯ, ನನಗೆ ಲೌಕಿಕ ಪರಮಾರ್ಥಿಕ ಸಹಾಯವು ತಪ್ಪಿಹೋದಕಾರಣ ಎಲ್ಲ ವಿಚಾರ ಗಳು ಅಲ್ಲಿಯೇ ಉಪರಮಿಸಿದವು.

(೪) ಶ್ರೀಯುತ ಸ್ವಾಮಿರಾವ ಇವರು ಯಾತ್ರಾಮಾಡಿದ ಬಳಿಕ (ಅವರು ಶ್ರೀ ಪುರಂದರ ದಾಸಾರ್ಯರ ಪುಣ್ಯತಿಥಿಯ ನಿಮಿತ್ತ ಪ್ರತಿ ವರ್ಷ ಮುಂಡೇವಾಡಿ ದಾಸಾರ್ಯರಲ್ಲಿ ಹೋಗುವಂತೆ ಶಕೆ ೧೮೪೨ರಲ್ಲಿ ನಾನು ಮುಂಡೆವಾಡಿಗೆ ಹೋಗಿದ್ದೆನು. ಆಗ್ಗೆ ಶ್ರೀ ಮುಂಡೇವಾಡಿ ದಾಸಾರ್ಯರ ಮುಖ್ಯ ಶಿಷ್ಯರಾದ ಮ। ರಾ। ಬಿಂದೂರಾವ ಮುತಾಲೀಕ (ಧಾರವಾಡ) ಇವರು ಶ್ರೀಪ್ರಾಣೇಶ ದಾಸಾರ್ಯರ ಪದಪದ್ಯಗಳನ್ನು ಕೇಳಿ ಸಂತೋಷ ಬಟ್ಟು, ನಾವೇ ಸ್ವಂತ ನಮ್ಮ ಖರ್ಚಿನಿಂದ ದಾಸಾರ್ಯರ ಪದಪದ್ಯಗಳನ್ನು ಮುದ್ರಿಸಿ ಕೊಡುವೆವೆಂದು ಹೇಳಿ ಅದರಂತೆ ಕಲವು ಪದ್ಯಗಳನ್ನು ಮಾತ್ರ ಮುದ್ರಿಸಿದರು. ಆದರೆ ಮುಂದೆ ಕಲವು ಕಾರಣಾಂತರಗಳಿಂದ ಉದ್ದಿಷ್ಟ ಕಾರ್ಯವು ಅವರಿಂದ ನೆರವೇರಲಿಲ್ಲ. ಆದರೂ ನಾವು ಈಗ ಪ್ರವರ್ತಿಸಿ ರುವ ಕಾರ್ಯಕ್ಕೆ ಅವರ ಉತ್ತೇಜನವೇ ಕಾರಣವಾಯಿತೆನ್ನುವದಕ್ಕೆ ಸಂದೇ ಹವಿಲ್ಲಾ. ಈ ಪ್ರಕಾರವಾಗಿ ಈ ಸತ್ಕಾರ್ಯಕ್ಕೆ ನಮ್ಮನ್ನು ಪ್ರೋತ್ಸಾಹಿಸಿದ್ದ ಕ್ಕಾಗಿ ಅವರ ಉಪಕಾರವನ್ನು ಎಂದೂ ಮರೆಯುವಂತಿಲ್ಲ.

(೫) ಹೀಗೆ ಒಂದಲ್ಲ ಎರಡಲ್ಲ ಅನೇಕ ಕಾರಣಗಳಿಂದ, ನೆನೆ ಗುದಿಗೆ ಬಿದ್ದ ಈ ಕಾರ್ಯವನ್ನು ಲೋಕೋಪಕಾರಾರ್ಥವಾಗಿಯೂ, ದಾಸಾರ್ಯರ ಗ್ರಂಥಗಳು ದೇಶದಲ್ಲಿ ಹಬ್ಬಿ ಹರಿ ಬೀಳಲೆಂಬದಾಗಿಯೂ, ಶ್ರೀ ಹರಿವಾಯುಗಳ ಪ್ರೇರಣೆಯಿಂದ ಪುನಃ ಕೈಕೊಂಡಿರುವೆವು. ಶ್ರೀ ಪ್ರಾಣೇಶ ದಾಸಾರ್ಯರ ಶಿಷ್ಯರು ಅನೇಕ ಪ್ರಾಂತಗಳಲ್ಲಿ ಅನೇಕರಾಗಿರು ವದರಿಂದ ಇವರ ಪದಪದ್ಯಗಳಾದರೂ, ಅನೇಕ ಕಡೆಯಲ್ಲಿ ಖಂಡಮಂಡಲ ವಾಗಿರುವವು. ಆದಕಾರಣ ದಾಸಾರ್ಯರ ಸಂಪೂರ್ಣ ಕೀರ್ತನಗಳನ್ನು

ಸಂಗ್ರಹಿಸುವದು ಸುಲಭಸಾಧ್ಯವಲ್ಲ. ಇದರಲ್ಲಿರುವ ಎಲ್ಲ ಪದಗಳು, ಒಂದು ಪ್ರಾಚೀನ ಪುಸ್ತಕದ ಮೇಲಿಂದ ಬರೆಯಲ್ಪಟ್ಟವೆ. ಈ ಪುಸ್ತಕವನ್ನು ಬರೆದು ಸುಮಾರು ೧೨೫–೧೩೦ ವರ್ಷಗಳಾದಕಾರಣ ಕೆಲವು ಪುಟಗಳ ಕೊನೆಯು ಹರಿದುಹೋಗಿರುವದು. ಕೆಲವು ಅಕ್ಷರಗಳು ಹಾರಿಹೋಗಿರುವವು. ಆದರೂ ಈ ಸ್ಥಳದಲ್ಲಿ ದಾಸಾರ್ಯರ ವಂಶಸ್ಥರೂ ಪದಪದ್ಯಗಳನ್ನು ಬಲ್ಲವರೂ ಇದ್ದಕಾರಣ ವಿಶೇಷವಾದ ತೊಂದರೆಗಳೇನೂ ಸಂಭವಿಸಲಿಲ್ಲ. ದಾಸಾರ್ಯರು ಬರೆದ ಕಥೆಗಳಲ್ಲಿ ಕೆಲವುಗಳನ್ನು ಈ ಮೊದಲೆ ಪ್ರಕಟಿಸಿದ್ದು ಉಳಿದ ೭ ಕಥೆಗಳನ್ನು ಯಥಾನುಕೂಲ ಮುಂದೆ ಪ್ರಸಿದ್ಧಿಸುವೆವು. ಈ ಗ್ರಂಥದಲ್ಲಿ ಶ್ರೀಪ್ರಾಣೇಶ ದಾಸಾರ್ಯರ ೨೫೨ ಕೀರ್ತನಗಳಲ್ಲದೆ, ಶ್ರೀ ಗುರುಪ್ರಾಣೇಶ ದಾಸಾರ್ಯರ ೧೮ ಕೀರ್ತನಗಳನ್ನೂ, ಮತ್ತು ಶ್ರೀ ಶ್ರೀಶಪ್ರಾಣೇಶ ವಿಠಲರ (ರಾಮದಾಸರ) (೧೪) ಕೀರ್ತನಗಳನ್ನೂ, ಹಾಗೂ ಸ್ವಾಮಿರಾವ ಇವರಿಂದ ರಚಿತವಾದ ಶ್ರೀ ವರದೇಂದ್ರ ಸ್ವಾಮಿಗಳವರ ಸ್ವಪ್ನವೃಂದಾವನಾಖ್ಯಾನವನ್ನೂ ಸಂಗ್ರಹಿಸಿರುವೆವು.

ಮೊದಲಿಗೆ ಈ ಕೀರ್ತನಗಳನ್ನು ಸಂಗ್ರಹನಮಾಡುವ ಕೆಲಸದಲ್ಲಿ ಪೂರ್ಣ ಸಹಾಯಮಾಡಿದಂಥ ದಾಸಾರ್ಯರ ಪ್ರಪೌತ್ರರಾದ ತಿ। ರಾಮಚಂದ್ರ ವಿಜಯರಾವ ಕುಲಕರ್ಣಿ, ಮತ್ತು ದಾಸಾರ್ಯರ ವಂಶಸ್ಥರಾದ ಹನಮಂತ ವ್ಯಾಸರಾವ ಕು। ಲಿಂಗಸೂಗೂರ ಇವರ ಉಪಕಾರವು ಚಿರಸ್ಮರಣೀಯವಾಗಿರುವದು. ಪದಗಳನ್ನು ಬರೆಯುವದರಲ್ಲಿಯೂ ಸಮಾಖ್ಯ ಮಾಡುವದರಲ್ಲಿಯೂ ಸಹಾಯಮಾಡಿದ, ದಾಸಾರ್ಯರ ಶಿಷ್ಯವರ್ಗ ವಂಶಸ್ಥರಾದ ತಿ। ರಾ। ಹನುಮಂತಾಚಾರ್ಯ ಜೋಸಿ, ಮು। ರಾ। ವೆಂಕಟರಾವ ಹಳ್ಳೆರಾವ ವಕೀಲ ಇವರಿಗೂ ಅತ್ಯಂತ ಕೃತಜ್ಞತನಾಗಿರುವೆನು. ಇತ್ತೀಚಿಗೆ ಈ ಮುದ್ರಣ ಕಾರ್ಯದಲ್ಲಿ ಸಂತತವಾಗಿ ಶ್ರಮ ತೆಗೆದುಕೊಂಡು ಪದಪದ್ಯಗಳನ್ನು ಬರೆಯುವದರಲ್ಲಿಯೂ, ಸಮಾಖ್ಯ ಮಾಡುವದರಲ್ಲಿಯೂ ಪೂರ್ಣ ಸಹಾಯ ಮಾಡಿದ ದಾಸಾರ್ಯ ವಂಶಸ್ಥರಾದ ಮುದ್ದುರಂಗರಾವ ಮಾಸ್ತರ ಇವರ ಉಪಕಾರ ಸ್ಮರಿಸಿ, ಇವರಿಗೆ ದಿನೆದಿನೇ ಜ್ಞಾನಭಕ್ತ್ಯಾದಿಗಳು ವರ್ಧಿಸಲೆಂದು ಶ್ರೀ ಹರಿಯನ್ನು ಪ್ರಾರ್ಥಿಸುವೆನು.

ಈ ಗ್ರಂಥವು ಲೋಕಮಾನ್ಯವಾಗಿ ಭಗವದ್ಭಕ್ತರಿಗೆ ಹಿತಕರವಾಗಿ ತೋರಿದಲ್ಲಿ, ನಮ್ಮ ಶ್ರಮವು ಸಫಲವಾಯಿತೆಂದು ತಿಳಿಯುತ್ತೇವೆ ಶ್ರೀ ಹರಿ ವಾಯುಗಳು ಈ ಸದ್ಧೇತುವನ್ನು ಪೂರ್ಣ ಮಾಡಲೆಂದು ಪ್ರೇಮಪೂರ್ವಕ ವಾಗಿ ಪ್ರಾರ್ಥಿಸುತ್ತೇನ.

ಶ್ರೀ ದಾಸಾರ್ಯರ ವಂಶಜರ ಬಂಧುವರ್ಗಕ್ಕೆ ಸೇರಿದ
ಕಶ್ಚಿದ್ಭಕ್ತನಾದ
ಹನಮಂತರಾವ ವೆಂಕಟರಾವ ಕುಲಕರ್ಣಿ ಗೊರಾಬಾಳ,
ವಕೀಲ, ಲಿಂಗಸೂಗೂರ,

ಶಕ ೧೮೪೪ ಆಷಾಢ ಶು। ೧೦ **ಜಿಲ್ಲಾ ರಾಯಚೂರ, ನೈಜಾಂ.**

॥ श्री सीताराम चंद्रो विजयते ॥

प्राणपतिपदद्वंद्व पंकजासक्त मानस ॥
शमादि गुण संयुक्तं श्री प्राणेश गुरुं भजे ॥

## ಸಂಕ್ಷಿಪ್ತ

# ಶ್ರೀ ಪ್ರಾಣೇಶ ದಾಸಾರ್ಯರ ಚರಿತ್ರೆ.

ಪರಮ ಭಾಗವತ ಶಿರೋಮಣಿಗಳೆನಿಸಿ, ದಾಸವರ್ಗದಲ್ಲಿ ಪ್ರಸಿದ್ಧಿಯನ್ನು ಹೊಂದಿದ ಶ್ರೀಪ್ರಾಣೇಶ ದಾಸರಾಯರು, ನೈಜಾಂ ಇಲಾಖೆ ಜಿಲ್ಲಾ ರಾಯಚೂರ ತಾಲೂಕು ಲಿಂಗಸೂಗೂರ ಪೈಕಿ ಲಿಂಗಸೂಗೂರದಲ್ಲಿ, ಕಾಶ್ಯಪ ಗೋತ್ರದ, ಶ್ರೀಪತಿ ಅಯ್ಯನವರೆಂಬ ಪ್ರಸಿದ್ಧ ಸದ್ವೈಷ್ಣವ ವಂಶದಲ್ಲಿ ಶಾನುಭೋಗ ತಿರುಕಪ್ಪನವರ ಸುತರಾಗಿ ಜನಿಸಿ, ಯೋಗೇಂದ್ರರಾಯರೆಂಬ ಹೆಸರಿನಿಂದ ಕರೆಸಿಕೊಂಡರು ಜನನ ಕಾಲದಲ್ಲಿಯೇ ಶ್ರೀ ದಾಸಾರ್ಯರ ಶರೀರವೆಲ್ಲವೂ ಶ್ವೇತ ವರ್ಣ ಪರಿಶಿಷ್ಟವಾಗಿ, ಅತಿತೇಜಃಪುಂಜವಾಗಿತ್ತು. ದಾಸಾರ್ಯರ ಜನನಿಜನಕರು ಇದೊಂದು ಕೆಟ್ಟ ರೋಗವೆಂದು ಭಾವಿಸಿ, ಚಿಕ್ಕಂದಿನಲ್ಲಿಯೇ ಶ್ರೀ ಮನ್ಮಂತ್ರಾಲಯದಲ್ಲಿ ಕೆಲಕಾಲ ಸೇವಾಮಾಡಿಸಲು, ಸಕಲ ಶ್ವೇತವು ನಿವಾರಣವಾಗಿ ಅಂಗಾಲಿನಲ್ಲಿ ಮಾತ್ರ ಸ್ವಲ್ಪ ಉಳಿಯಿತು ಇದನ್ನು ಕಂಡು, ಪೂರ್ವದಂತೆ ಪುನಃ ಸೇವಾನಡೆಸಲು, ಶ್ರೀ ಗುರುರಾಜರಿಂದ:—"ಮೂಲ ಸ್ವರೂಪಕ್ಕೆ ಸೇರಿದ್ದ ಕಾರಣ ಇದು ಹೋಗಲಾರದೆಂದು" ಸ್ವಪ್ನವಾಗಲಾಗಿ, ಶ್ರೀ ದಾಸಾರ್ಯರ ಜನಕರಾದ ತಿರುಕಪ್ಪನವರು ಬಹು ಆನಂದದಿಂದ ಗುರುರಾಜರ ಸೇವೆಯನ್ನು ಸಂಪೂರ್ಣ ತೀರಿಸಿಕೊಂಡು, ಮರಳಿ ತಮ್ಮ ಗ್ರಾಮಕ್ಕೆ ದಾಸಾರ್ಯರೊಂದಿಗೆ ಬರುವವರಾದರು. ಶ್ರೀಮತ್ಪೂಜ್ಯ ದಾಸಾರ್ಯರು ಸಾಕ್ಷಾತ್ ಮರುದಂಶಯುಕ್ತರಾದ, ಪಾಂಡುರಾಜನ ಅವತಾರವೆಂದು ಹಿರಿಯರ ಹೇಳಿಕೆಯ ಮೇಲಿಂದ ತಿಳಿದುಬರುತ್ತದೆ.

ಶ್ರೀ ದಾಸಾರ್ಯರು ಕೆಲಕಾಲ ಲೌಕಿಕದಲ್ಲಿದ್ದು, ಆ ಮೇಲೆ ಶ್ರೀಮದ್ಹರಿ ಕಥಾಮೃತಸಾರವೆಂಬ ಸಕಲ ವೇದಾರ್ಥ ಪ್ರತಿಪಾದಕವಾದ ಗ್ರಂಥ

ವನ್ನು ವಿರಚಿಸಿದ ಕವಿಕುಲ ತಿಲಕ ಶ್ರೀಮಾನ್ವಿ ಕ್ಷೇತ್ರಸ್ಥ ಶ್ರೀಮಜ್ಜಗನ್ನಾಥ ದಾಸಾರ್ಯರಲ್ಲಿ ವರತತ್ವೋಪದೇಶವನ್ನು ಕೈಕೊಂಡು, ಅನೇಕ ವರ್ಷಗಳ ವರೆಗೆ ದಾಸಾರ್ಯರ ಸೇವೆಯನ್ನು ಮಾಡಿ, "ಶ್ರೀಪ್ರಾಣೇಶ ವಿಠ್ಠಲ" ಎಂಬ ಅಂಕಿತವನ್ನು ಪಡೆದು, ಶ್ರೀಮಜ್ಜಗನ್ನಾಥ ದಾಸಾರ್ಯರ ಪರಮ ಪ್ರೀತಿಗೆ ಪಾತ್ರರಾಗಿ ಶಿಷ್ಯಶಿರೋರತ್ನವೆನಿಸಿಕೊಂಡು, ಭಗವದ ಪರೋಕ್ಷಿಗಳಾದರು

ಶ್ರೀಪ್ರಾಣೇಶ ದಾಸಾರ್ಯರು ಅನೇಕ ಪದಪದ್ಯ ಹರಿಕೀರ್ತನೆ ಗಳನ್ನು ರಚಿಸಿರುವರಲ್ಲದೇ ಎಷ್ಟೋ ಪ್ರಮೇಯ ಭಾಗಗಳಲ್ಲಿಯೂ ಗ್ರಂಥ ರೂಪದಿಂದ ನಿರ್ಣಯ ಮಾಡಿರುತ್ತಾರೆ.

೧ ಗಾಲವ ಚರಿತ್ರೆ, ೨. ಕಾಲಿಯಾಮರ್ದನ ಕಥೆ, ೩. ಬುದ್ಧಿ ಬ್ರಹ್ಮನ ಕಥೆ, ೪. ಗೋಪಿಕಾವಿಲಾಸ, ೫. ಭ್ರಮರಗೀತಾ, ೬ ಮುಯ್ಯದ ಪದ, ೭. ಶ್ರೀಹರಿ ವಾಯುಸ್ತುತಿ, ೮ ಸೀತಾಸ್ವಯಂವರ, ೯ ಕಾಳೀ ಸ್ವಯಂವರ, ೧೦ ಹನುಮದ್ವಿಲಾಸ (ಗರುಡಗರ್ವಹರಣ), ೧೧ ಭೀಮ ಸೇನವಿಲಾಸ (ಕೀಚಕವಧ), ೧೨ ವೀರಭದ್ರವಿಲಾಸ (ದಕ್ಷಾಸುರಧ್ವಂಸ ಕಥೆ), ೧೩ ಪಾರ್ಥವಿಲಾಸ (ಸುಭದ್ರಾಹರಣ), ೧೪. ಅನಿರುದ್ಧವಿಲಾಸ (ಉಷಾಹರಣ), ೧೫. ವಶಿಷ್ಠ ವಿಶ್ವಾಮಿತ್ರಾಖ್ಯಾನ, ೧೬. ಊರ್ಧ್ವಪುಂಡ್ರ ಮಹತ್ಮ್ಯ, ೧೭. ತಿಥಿತ್ರಯನಿರ್ಣಯ ಮುಂತಾದ ಅನೇಕ ಕಥೆಗಳನ್ನು ಬಹು ರಸಭರಿತವಾಗಿಯೂ, ಭಕ್ತ್ಯುದ್ರೇಕವಾಗುವಂತೆಯೂ ರಚಿಸಿರು ವರು ದಾಸಾರ್ಯರ ಕೆಲವು ಕವಿತೆಗಳು ಶುದ್ಧ ಕನ್ನಡದಲ್ಲಿಯೂ, ಕೆಲವು ಹಳೆಗನ್ನಡದಲ್ಲಿಯೂ, ಕೆಲವು ಬಹು ಸರಳವಾಗಿಯೂ, ಕೆಲವು ಬಹು ಪ್ರೌಢವಾಗಿಯೂ, ಕೆಲವು ಶುದ್ಧ ಸಂಸ್ಕೃತದಲ್ಲಿಯೂ ಇರುವವು. ಕೆಲವು ಕವಿತೆಗಳು ಅನೇಕ ಪ್ರಮೇಯಗಳಿಂದಲೂ, ಅನೇಕ ಮಹಾಪುರಾಣ ಉಪ ಪುರಾಣೋಕ್ತ ಕಥೆಗಳಿಂದಲೂ, ದಾಸರ ಗೌಪ್ಯಗೋಷ್ಟಿಗಳಿಂದಲೂ ಕೂಡಿರು ವದರಿಂದ ಅರ್ಥವಾಗುವದೇ ಪರಮ ಕಷ್ಟವಾಗಿದೆ. ಇವೆಲ್ಲ ಕವಿತೆಗಳನ್ನು ನೋಡುವದರಿಂದ, ಇವರು ಹಳೆಗನ್ನಡ ಹಾಗೂ ಸಂಸ್ಕೃತದಲ್ಲಿ ಪೂರ್ಣ ಯೋಗ್ಯತೆಯುಳ್ಳವರೂ, ಭಗವದ ಪರೋಕ್ಷಿಗಳೂ ಇದ್ದರೆಂಬುವದು ಸಹಜ ವಾಗಿಯೇ ವ್ಯಕ್ತವಾಗುತ್ತದೆ.

ಈ ಮಹನೀಯರು ಲೌಕಿಕ ಅತಿ ದಾರಿದ್ರ್ಯವನ್ನು ಅನುಭೋಗಿಸಿ ದಾಗ್ಯೂ ಪ್ರತಿನಿತ್ಯ ಪ್ರಾತಃಕಾಲದಲ್ಲಿ ತಮ್ಮ ಆಹ್ನಿಕವನ್ನು ತೀರಿಸಿಕೊಂಡು, ಸ್ವಗುರುಗಳಿಂದ ದತ್ತವಾದ ಶ್ರೀ ಸೀತಾ, ರಾಮ, ಲಕ್ಷ್ಮಣ, ವೇದವ್ಯಾಸ, ಪಟ್ಟಾಭಿರಾಮ, ತಾಂಡವಕೃಷ್ಣ, ಶ್ರೀ ಲಕ್ಷ್ಮಿವೆಂಕಟೇಶ ಮುಂತಾದ ೧೪ *ಪ್ರತಿಮೆಗಳನ್ನು ಅರ್ಚಿಸಿ, ಶ್ರೀ ಗೋಪಾಲಕೃಷ್ಣ ದೇವರ ಸೇವೆಯೆಂದು ಭಾವಿಸಿ, ತಮ್ಮ ಗುರುಗಳ "ಗ್ರಹಕರ್ಮ ವ ಬ್ಯಾಸರದಲೆ ಪರಮೋತ್ಸಹದಲಿ ಮಾಡುತ, ಮೂಜಗದಾ। ಮಹಿತನ ಸೇವೆ ಇದೇ ಎನುತಲಿ, ಅಪರಹರ್ಮನ ದಲಿ ಮೋದಿಸಿ ಸಮರ್ಪಿಸುತಿಪ್ಪದೆ" ಎಂಬ ವಚನಾನುಸಾರ ಪ್ರತಿನಿತ್ಯದಲ್ಲಿ ಗೋವುಗಳನ್ನು ಕಾಯುವದಕ್ಕೆ ಅಡವಿಗೆ ಹೋಗಿ, ಅಲ್ಲಿದ್ದ ಗೋಪಾಲಕರಿಗೆ ತಮ್ಮ ಗೋವುಗಳನ್ನು ಮೇಯಿಸುವದಕ್ಕಾಗಿ ಒಪ್ಪಿಸಿ, ತಾವು ಒಂದು ಗಿಡದ ನೆರಳಿನಲ್ಲಿ ಶಾಂತಮನಸ್ಸಿನಿಂದ ಕುಳಿತು ಪರಮಾತ್ಮನ ಸ್ತೋತ್ರಗಳನ್ನು ರಚಿಸುವರು ವಿಶೇಷವಾಗಿ ದಶಮಸ್ಕಂಧ ಭಾಗವತ ಕಥಾಯುಕ್ತವಾದ ಶ್ರೀಕೃಷ್ಣ ದೇವರ ಚರಿತ್ರೆಯನ್ನು ಕೀರ್ತಿಸುವರು; ಮರಳಿ ತಮ್ಮ ಗೃಹಕ್ಕೆ ಗೋವುಗಳನ್ನು ತಿರುಗಿಸಿಕೊಂಡು ಬರುವರು. ಇದಲ್ಲದೆ ತಮ್ಮ ಗುರುಗಳ ಆಜ್ಞೆಯಂತೆ ವರ್ಷಕ್ಕೊಮ್ಮೆ ತಮ್ಮ ನಿತ್ಯಾಹ್ನಿಕವನ್ನು ಸುಮಾರು ನಾಲ್ಕು ತಾಸಿನ ಮೇಲೆ ತೀರಿಸಿಕೊಂಡು, ಲಿಂಗಸೂಗೂರ ಕ್ಷೇತ್ರದಿಂದ ಹದಿನಾರು ಹರದಾರಿಯ ಮೇಲಿದ್ದ "ಮಾನ್ವಿ ಕ್ಷೇತ್ರಕ್ಕೆ" ೬-೭ ತಾಸಿಗೆ ಹೋಗಿ ಸೇರು ತಿದ್ದರು. ಅಲ್ಲಿಂದ ಶ್ರೀ ಜಗನ್ನಾಥ ದಾಸರಾಯರು ತಮ್ಮ ಪಿತೃಕಾರ್ಯ ದಲ್ಲಿ ಇವರೊಬ್ಬರಲ್ಲಿಯೇ "एकंसंतं बहुधाकल्पयंति" ಎಂಬೋರಿತ್ಯಾ ಚಿಂತ ನೆಯನ್ನು ಮಾಡಿ ತಮ್ಮ ಪಿತೃಗಳನ್ನು ತೃಪ್ತಿಗೊಳಿಸುತಿದ್ದರು. ಇದರ ಮೇಲಿಂದ ಈ ದಾಸಾರ್ಯರಿಗೆ ಸಾಂಶರೂ ದೇವತೆಗಳೂ ಅನ್ನಲಿಕ್ಕೆ ಸ್ವಲ್ಪಾ ದರೂ ಸಂಶಯವಿಲ್ಲ

ದಾಸಾರ್ಯರಿಗೆ ಇಬ್ಬರು ಬಂಧುಗಳಿದ್ದರು; ಇವರಲ್ಲಿ ಇವರ ಅಣ್ಣಂದಿ ರಾದ ರಾಘಪ್ಪನವರು ಒಳ್ಳೇ ಭಗವದ್ಭಕ್ತರೂ, ಶ್ರೀ ಗುರುರಾಜರ ಅನುಗ್ರಹಕ್ಕೆ ಪಾತ್ರರೂ ಆಗಿದ್ದರು. ಇವರು ಲೌಕಿಕ ಕಾರ್ಯದಲ್ಲಿದ್ದಾಗ ಸರಕಾರದ

* ಈ ೧೪ ಪ್ರತಿಮೆಗಳು ಇನ್ನೂ ದಾಸಾರ್ಯರ ವಂಶಜರಲ್ಲಿ ಇರುವವು.

ದ್ರವ್ಯದ ಅಪವ್ಯಯವನ್ನು ಮಾಡಿದರೆಂಬ ಆರೋಪದಿಂದ ಇವರನ್ನು ಗ್ರಾಮಾಂತರಕ್ಕೆ ವೈದು ಬಂಧನದಲ್ಲಿಡಲು, ಶ್ರೀ ಗುರುರಾಜರ ಅನುಗ್ರಹದಿಂದ ತಮ್ಮ ನಿತ್ಯಾಹ್ನಿಕ ಸಮಯದಲ್ಲಿ ಪ್ರಕಟವಾದ ಸರ್ಪಕ್ಕೆ (ತಮಗೆ ಕೊಟ್ಟ) ಹಾಲನ್ನು ಸಮರ್ಪಿಸಿ, ತಾವು ಉಪೋಷಣದಿಂದ ಕೆಲವು ದಿನಗಳ ವರೆಗೆ ಕಾಲಕಳೆದು ಸ್ವಮಹಿಮೆಯನ್ನು ತೋರಿಸಿ, ಬಿಡುಗಡೆಯಾದರಂತೆ. ದಾಸಾರ್ಯರು ರಚಿಸಿದ (೨೫೨) ಕೀರ್ತನಗಳು ರಾಘಪ್ಪನವರಿಂದಲೇ ಬರೆಯಲ್ಪಟ್ಟವೆ. ಮತ್ತು ದಾಸಾರ್ಯರ ತಮ್ಮಂದಿರಾದ ಸುಬ್ಬಣ್ಣನವರು ೨೫-೩೦ ವರ್ಷಗಳ ವರೆಗೆ ಅತಿ ಮುಗ್ಧಭಾವದಿಂದಿದ್ದು ಭೂಮಿಯ ಕೆಲಸವನ್ನು ಮಾಡಿಸುತ್ತಿದ್ದರು. ಒಂದು ದಿನ ಒಬ್ಬ ವಿಜಾತಿಯ ಪುರುಷನು ಜೈಮಿನಿಭಾರತದ ಕೆಲವು ಪದ್ಯಗಳ ಅರ್ಥವನ್ನು ತಪ್ಪು ಹೇಳಲಾಗಿ, ಸುಬ್ಬಣ್ಣನವರು ಅವನನ್ನು ಸನ್ಮಾರ್ಗಕ್ಕೆ ತರಲೋಸುಗ ಪ್ರಯತ್ನಮಾಡಿದರು ಆಗ ಇವರ ಸಂತತ ಮುಗ್ಧಭಾವವನ್ನು ನೋಡಿದ್ದ ಅವನು: "ಇದು ಕೋಣವನ್ನು ಕಟ್ಟಿ ಮೊಟ್ಟೆಯ ನೀರನ್ನು ಹೊಡೆದಂತೆ ಅಲ್ಲವೆಂದು" ಸ್ವಲ್ಪ ಡೊಂಕ ಮಾತನ್ನಾಡಲು, ಇವರಿಗೆ ವೈರಾಗ್ಯ ಪುಟ್ಟಿ, ಶ್ರೀಪ್ರಾಣೇಶ ದಾಸಾರ್ಯರ ಅನುಗ್ರಹದಿಂದ ಭಗವದ್ಭಕ್ತರನಿಸಿಕೊಂಡರು.

ದಾಸಾರ್ಯರ ಕಾಲದಲ್ಲಿ ಅನೇಕ ಮಹಿಮೆಗಳು ಪ್ರಕಟವಾಗಿರುವವೆಂದು ಶಿಷ್ಯವರ್ಗದಲ್ಲಿ ಸೇರಿದ ಹಿರಿಯರ ಹೇಳಿಕೆಯಿಂದ ತಿಳಿದುಬರುತ್ತದೆ ಅವುಗಳಲ್ಲೊಂದು ವಿಶೇಷ ಮಹತ್ವದ ಸಂಗತಿ ಏನಂದರೆ:—ಶ್ರೀ ಮದ್ರಾಘವೇಂದ್ರ ಸ್ವಾಮಿಗಳವರಿಂದ (೭) ಏಳನೇ ಪೀಠಸ್ಥರಾದ ಶ್ರೀ ಮದ್ವರದೇಂದ್ರ ಸ್ವಾಮಿಗಳವರು ಲೋಕೋದ್ಧಾರಾರ್ಥವಾಗಿ ಸಂಚಾರಕ್ಕೆ ಹೊರಟು, ಲಿಂಗಸೂಗೂರಲ್ಲಿ ದಾಸಾರ್ಯರ ಗೃಹದಲ್ಲಿ ಅತಿಥಿಗಳಾಗಿ ಬಿಜಯಂಗೈಸಿದಾಗ್ಗೆ ದಾಸಾರ್ಯರ ಆತಿಥ್ಯವನ್ನು ಸ್ವೀಕರಿಸಿ, ಅವರ ಉತ್ತಮ ಗುಣಗಳಿಗೂ ಭಕ್ತಿಭಾವಗಳಿಗೂ ಲುಬ್ಧರಾಗಿ, ದಾಸಾರ್ಯರ ಮೇಲೂ, ಅವರ ವಂಶಸ್ಥರ ಮೇಲೂ ಪರಮಾನುಗ್ರಹ ಮಾಡಬೇಕಾಗಿ ದಾಸಾರ್ಯರ ಕಡೆಯಿಂದ ಒಂದು ಬಣವಿಯ ದೊಡ್ಡಿಯನ್ನು ಕೃಷ್ಣಾರ್ಪಣವೆನಿಸಿಕೊಂಡು, ನಾವು ಕೇಳಿದಾಗ್ಗೆ ಒಪ್ಪಿಸಬೇಕೆಂದಾಜ್ಞಾಪಿಸಿ, ಮುಂದೆ ದಿಗ್ವಿಜಯ ಮಾಡುತ್ತ

ಮಾಡುತ್ತ ಪುಣೆ ಶಹರದಲ್ಲಿ ಶಾಲಿವಹನ ಶಕೆ ೧೭೦೭ನೇ ವಿಶ್ವಾವಸು ನಾಮ ಸಂವತ್ಸರದ ಆಷಾಢ ಶು। ೬ ಮಂಗಳವಾರ ಉತ್ತರಾನಕ್ಷತ್ರದಲ್ಲಿ ಇಹ ಲೋಕವನ್ನು ಬಿಟ್ಟು ವೈಕುಂಠಕ್ಕೆ ತೆರಳುವರಾದರು. ಆ ಮೇಲೆ ಕೆಲಕಾಲ ದಲ್ಲಿ ಶ್ರೀಗಳವರು ಶ್ರೀಪ್ರಾಣೇಶ ದಾಸಾರ್ಯರ ಸ್ವಪ್ನದಲ್ಲಿ ಅಪ್ಪಣೆಮಾಡಿದ್ದೇ ನಂದರೆ: – "ನಾವು ವೈಷ್ಣವಾಗ್ರಹಾರವಾದ ಲಿಂಗಸೂಗೂರಲ್ಲಿ ಇರಲಪೇಕ್ಷಿಸಿ ನೀವು ದಾನಕೊಟ್ಟಿರುವ ದೊಡ್ಡಿಯಲ್ಲಿ ಬಣವಿಯ ಸೊಪ್ಪೆಯ ಕೆಳಗೆ ತುಲಸಿ ವೃಕ್ಷರೂಪದಿಂದ ಬಂದಿದ್ದೇವೆ; ಅಲ್ಲಿ ವೃಂದಾವನ್ನು ಸ್ಥಾಪಿಸಿರಿ; ಪುಣೆ ಯಿಂದ ನಮ್ಮ ಪಾದುಕಗಳನ್ನು ಇಲ್ಲಿಗೆ ಕಳುಹುವದಾಗಿ ಆಜ್ಞಾಪಿಸಿದ್ದೇವೆ; ಅವನ್ನು ವೃಂದಾವನದಡಿಯಲ್ಲಿರಿಸಿ ಪೂಜಿಸಿರಿ.

ಶ್ರೀಗಳವರ ಆಜ್ಞೆಯ ಪ್ರಕಾರ ನೋಡಲು ಬಣವಿಯ ಸೊಪ್ಪೆಯ ಕೆಳಗೆ ಒಂದು ಪುರುಷಪ್ರಮಾಣದ ಪ್ರಫುಲ್ಲಿತ ತುಲಸಿ ವೃಕ್ಷವಿದ್ದದ್ದನ್ನು ನೋಡಿ, ಸರ್ವರೂ ಆಶ್ಚರ್ಯಚಕಿತರಾಗಿ, ಗುರುಗಳ ಮಹಿಮೆಯನ್ನು ಕೊಂಡಾಡಿ, ಕೆಲಕಾಲ ಆ ವೃಕ್ಷವನ್ನು ಪೂಜಿಸಿ ಅಲ್ಲಿ ವೃಂದಾವನವನ್ನು ಸ್ಥಾಪಿಸಿದರು ಅತ್ತ ಪುಣೆಯಲ್ಲಿದ್ದ ಅರ್ಚಕರಿಗ ಪಾದುಕಗಳನ್ನು ಮಂತ್ರಾಕ್ಷತಸಮೇತ ಲಿಂಗಸೂ ಗೂರಿಗೆ ಕಳುಹುವದೆಂದು ಸ್ವಪ್ನದಲ್ಲಿ ಆಜ್ಞಾಪಿಸಿದ ಪ್ರಕಾರ ಸ್ವತಃ ಅರ್ಚ ಕರೇ ಪಾದುಕಗಳನ್ನು ಲಿಂಗಸೂಗೂರಿಗೆ ತಗದುಕೊಂಡುಬಂದು, ಶ್ರೀ ದಾಸಾ ರ್ಯರಿಗೆ ಕೊಡಲು, ಬಹು ಸಂಭ್ರಮದಿಂದ ವೃಂದಾವನದ ಅಡಿಯಲ್ಲಿಟ್ಟು ಪೂಜಿಸಿದರು ಇಂದಿಗೂ ಅವೇ ಪಾದುಕೆಗಳು ಇರುವವು ಅಂದಿನಿಂದ ಪ್ರತಿ ವರ್ಷ ಆಷಾಢ ಶು। ೬ಯಲ್ಲಿ ಶ್ರೀ ಗುರುಗಳ ಆರಾಧನಾರಥೋತ್ಸವ ಪ್ರತಿ ಗುರುವಾರ ಪಲ್ಲಕ್ಕಿಸೇವೆ, ನಿತ್ಯದಲ್ಲಿಯೂ ವೃಂದಾವನ ಪಾದುಕಗಳ ಪೂಜಾ ಮುಂತಾದ ಸೇವೆಗಳು ಸಂಭ್ರಮದಿಂದ ಜರುಗುತ್ತಿರುತ್ತವೆ. ಅರ್ವಾ ಚೀನ ಜನರಿಗ ಇಷ್ಟು ಸೇವಾ ಸಂಘಟಿಸುವದು ಶ್ರೀಪ್ರಾಣೇಶ ದಾಸರಾಯರ ಪುಣ್ಯಫಲವೇ ಸರಿ. ಶ್ರೀ ವರದೇಂದ್ರಾರ್ಯರು ಇಲ್ಲಿಗೆ ಸ್ವಪ್ನದಿಂದ ಬಂದ ಬಗ್ಗೆ ಶ್ರೀ ಗುರು ಪ್ರಾಣೇಶ ದಾಸಾರ್ಯರ ಶಿಷ್ಯವರ್ಗದಲ್ಲಿಯ ಒಬ್ಬ ದಾಸ ರಾಯರು ಬರೆದ ಒಂದು ಐತಿಹ್ಯವಿರುವದು. ಅದನ್ನು ಇಲ್ಲಿ ಬರೆಯುವದು ಅಪ್ರಾಸಂಗಿಕವಾಗದೆಂದೆಣಿಸಿ ಕೆಳಗೆ ಬರೆದಿರುತ್ತವೆ.

॥ ಮಧ್ಯನಾಮದ ಧಾಟಿ, ಝಂಪೆತಾಳ ॥

ಯತಿ ಶಿರೋಮಣಿಯಾದ ವರದೇಂದ್ರ ಗುರುರಾಯ । ರತಿಹರುಷ ದಿಂದ ಈ ಸ್ಥಳಕೆ ಬಂದೂ ॥ ಸಥಿಯಿಂದ ನಿಂತ ವೃತ್ತಾಂತಮಂ ಪೇಳ್ವದಕೆ । ಮತಿಗೊಟ್ಟು ಪೇಳಿಸಲಿ ಗುರುರಾಯರೂ ॥ ಪಲ್ಲ ॥ ಶ್ರೀಶ ರಾಮವ್ಯಾಸ, ದೇವರರ್ಚಕರಾದ । ಈ ಸ್ವಾಮಿಗಳವರಿಗೆ ಪ್ರೇಮಾಸ್ಪದಾ ॥ ದಾಸಕುಲ ದೀಪ ಶ್ರೀ ಗುರು ಜಗನ್ನಾಥಾಖ್ಯ । ದಾಸರಾಯರ ದಯವ ಸೂಸಿ ಪಡದಾ ॥ ೧ ॥ ಶ್ರೀಪತಿ ಅಯ್ಯನವರ ವಂಶಸ್ಥರಾದ ಈ । ಶ್ರೀಪ್ರಾಣೇಶ ದಾಸವರ್ಯ ರೀಗೇ ॥ ಶ್ರೀಪತೀ ದಯಮಾಡಿ ಒಲಿದ ಕಾರಣದಿಂದ । ಭೂಪ ಮುನಿವ ರರು ಬಂದಾಸಮಯದೀ ॥ ೨ ॥ ಆ ವನಿತು ಗುರುವರರ । ಶ್ರೀಪಾದ ಪೂಜೆಯನು । ತಾಪರಯುತರಾಗಿ ಅರ್ಚಿಸಲ್ಕೇ ॥ ಗೋಪತಿಯು ಅರ್ಚ ಕರು ಬಹು ತುಷ್ಟರಾಗಿ ಈ । ತಾಪಸದ ಸ್ಥಳವೆಮಗೆ ಈಯನಲ್ಕೇ ॥ ೩ ॥ ಈ ಕಾಯವೇ ತಮ್ಮ ಶ್ರೀಪಾದಕಮಲಕ್ಕ ಸ್ವೀಕಾರ ಮಾಡಿಸುವೆ ಕರುಣಿಸು ವದೂ ॥ ಬೇಕಂದು ಅನುಗ್ರಹವ ಮಾಡಿ ಬರುವಂಥ ಸುಖ । ನಾ ಕಾಣೆನೆಲ್ಲಿ ಈ ಪೃಥ್ವಿಯೊಳಗೇ ॥ ೪ ॥ ಅಂದು ಇವರಿಗೆ ದಾಸವರ್ಯರೀ ಭಾಷೆ ನುಡಿ। ದಂದದೀಯುಮಿವರರು ಅತಿ ಹರುಷದೀ ॥ ಸಾಂದೀಪಗೊಲಿದ ಶ್ರೀಹರಿ ಯಾತ್ರೆ ಆ ಪುಣ್ಯ । ಮಂದಿರದಿ ಮಾಡಿದಾನಂತರದಲೀ ॥ ೫ ॥ ಕೆಲವು ದಿವಸಾದ ಮ್ಯಾಲೀ ದಿವ್ಯಸ್ಥಳದಲ್ಲಿ । ತುಳಸಿ ವೃಕ್ಷದ ರೂಪ ತಾಳ್ವೆನೆನು ತಾ ॥ ಸಲೆ ಸ್ವಪ್ನದಲಿ ಬಂದು ಪೇಳಲಾಬಣವಿಯನು । ಬಲು ಬ್ಯಾಗದಿಂ ತಗಿಸಿ ನೋಡುತಿರಲೂ ॥ ೬ ॥ ದಿವ್ಯವಾದಂಥ ದಳಯುಕ್ತದಲಿ ಬೆಳದಿದ್ದ ಸೇವೆಗರ್ಹವಾದ ವೃಕ್ಷ ನೋಡಿ ॥ ಸವ್ಯಸಾಚಿಯ ಸೂತನೀ ಪರಿಯ ತೋರಿದಾ । ನೀವೆಲ್ಲ ನೋಡಿ ಆಶ್ಚರ್ಯವೆನುತಾ ॥ ೭ ॥ ಬಲ್ಲಿದಾರಾದ ಯತಿ ಮನುಷ್ಯನಳತೆಯ ವೃಕ್ಷ । ದಲ್ಲಿ ಪೂಜೆಯಗೊಳುತ ಇರುತ ಯಿರಲೂ ॥ ಸಲ್ಲಲಿತವಾದ ವೃಂದಾವನದಿ ಪೂಜೆಗಳು । ಸಲ್ಲಬೇಕೆಂದೆನುತ ಇಚ್ಛೆಮಾಡೀ ॥ ೮ ॥ ಯಾತ್ರೆ ಮಾಡಿದ ಬಳಿಕ ಒಂದೆರಡನೇ ವರುಷ । ಅತ್ರ ವೃಂದಾವನದಿ ಪೂಜೆಯನ್ನೂ ॥ ಸೂತ್ರನಾಮಕ ಪ್ರಾಣಪತಿಯೊಡನೆ ಆಗಲೆಂ । ಧಾತ್ರಿಸುರರಿಗೆ ಸೂಚನಾದ ಮೇಲೆ ॥ ೯ ॥ ಗುಲಗುಂಜಿ ಮರದಿ

ಯೊಳಗಿದ್ದ ವೃಂದಾವನದ । ತಿಳಿಯುನ್ನು ತರುವದಕ ಸ್ವಪ್ನವಾಗೇ ॥ ಶುಲ
ಭವ್ರೋ ಹ್ಯಾಗೂ ನೋಡಲುಬಹುದು ಎಂದು ಅಹೊ । ಬಲನ ಸ್ಮರಿಸುತ
ಪ್ರೋಗಲಾಕ್ಷಣದಲೀ ॥ ೧೦ ॥ ಖರಿಯುವಾಗಿರಲದನು ತಂದು ಸ್ಥಾಪಿಸು
ವಾಗ । ಸರುವಜ್ಞರಾಯರಂಶಸ್ಥರಾದಾ ॥ ವರ ಭುವನೇಂದ್ರ ಯತಿಗಳು
ಜುಮಲಪುರದಿಂದ । ನರಹರಿಯು ಶಾಲಗ್ರಾಮು ಕಳಿಸಿದಪನೂ ॥ ೧೧ ॥
ಈ ಶ್ರೇಷ್ಠವಾದ ವೃಂದಾವನದ ಮಧ್ಯದಲಿ । ಆರ್ಪಿಸಿ ಯಿಟ್ಟ ಕಾರಣದಿಂದಲೀ ॥
ಕು ಶ್ರೇಷ್ಠವಾದ ಸರ್ಪಗಳ ಭೀತಿಯು ಇಲ್ಲ । ಭೂಶ್ರೇಷ್ಠರಾದ ಜನರು
ಗಳು ಕೇಳೀ ॥ ೧೨ ॥ ಕರ್ಮಂಟವರರು ತಾವ್ ಪಿಡುವಂಥ ಹಾಲ
ಗಯು । ಪೇರ್ಮೆಯಿಂದೀ ಲಿಂಗಸೂಗುರದಲೀ ॥ ನಿರ್ಮಲದಿ ತಮ್ಮ
ವೃಂದಾವನದ ಸನ್ನಿಧಲಿ । ಸರ್ವದಾ ಪೂಜೆಗಿರಲೆಂದು ಸ್ವಪ್ನಾ ॥ ೧೩ ॥
ಅಲ್ಲಿ ಪುನಹಪಲಬ್ಧ ಅರ್ಚಕರಿಗಾಗಳ್ಕೆ । ಸಲ್ಲಲಿತನಾಗಿ ಕಳುಹಿದ ಕಾರಣಾ ॥
ಬಲ್ಲವರು ಬಹು ಭಕುತಿಯಿಂದ ಪೂಜಿಸಿ ಕೊನೆಗೆ । ಸಲ್ಲುವರು ಸದ್ಗತಿಗೆ
ಕೇಳಬಹುದು ॥ ೧೪ ॥ ಈ ಸ್ಥಳವು ಬಹು ಪುಣ್ಯ ಮಾಡಿದದರಿಂದಲ್ಲಿ ।
ವಾಸ್ತವ್ಯ ಇವರು ಬಂದಿರುವ್ಯತಿಹ್ಯಾ ॥ ಆಸ್ಥೆಯಿಂದಲ ಕೇಳಿ ತೋಷಬಡುವ
ವರ ಮನದ । ಆಸ್ಥೆ ಪೂರೈಸುವರು ಸರ್ವಜ್ಞರೂ ॥ ೧೫ ॥ ಸತ್ಯಸಂಕಲ್ಪ
ಶ್ರೀ ಬಾದರಾಯಣ ತನ್ನ । ಭೃತ್ಯವತ್ಸಲನೆಂಬ ಪ್ರತ್ಯಕ್ಷವಾ ॥ ಮರ್ತ್ಯ
ಲೋಕದ ಪದವಿ ಕೀಟದಿಂದಾಳಿಸಿದ । ನಾ ತೆರದಲಿನ್ನಿಂದ ಪೇಳಸಿದ ಪದವಾ
॥ ೧೬ ॥ ನೋದದಿಂದಲಿ ಈ ಹದಿನೇಳು ನುಡಿಯು ಶ್ರೀ । ಮೋದ ತೀರ್ಥರ
ಪಾದಕರ್ಪಿಸಿದನೂ ॥ ಮೋದ ಪುಟ್ಟುವಂತೆ ಪಠಣೆಮಾಡಲ್ಕೆ ಮಾ । ಮೋದ
ವಿಠ್ಠಲ ಪ್ರೀತನಾಗುತಿಹನೂ ॥ ೧೭ ॥ ಶ್ರೀ ಮಧ್ವೇಶಾರ್ಪಣಮಸ್ತು ॥

ಶ್ರೀ ವರದೇಂದ್ರ ಸ್ವಾಮಿಗಳವರು ಲಿಂಗಸೂಗೂರಲ್ಲಿ ವಾಸಮಾಡಿದ ಮೇಲೆ, ಶ್ರೀಪ್ರಾಣೇಶ ದಾಸಾರ್ಯರು ಸರ್ವದಾ ಹರಿಸ್ಮರಣೆಯನ್ನು ಮಾಡುತ್ತಾ, ಗುರುಗಳ ಸೇವಾ ಮತ್ತು ಸದ್ಗ್ರಂಥಪಾರ ಸತ್ಕಥಾಲಾಪವನ್ನೇ ಮಾಡುತ್ತ, ಅನೇಕ ಶಿಷ್ಯರಿಗೆ ಜ್ಞಾನೋಪದೇಶವನ್ನು ಮಾಡಿ ಉದ್ಧಾರ ಮಾಡುತ್ತ, ಶಾಶ್ವತವಾದ ಸತ್ಕೀರ್ತಿಯನ್ನು ಸಂಪಾದಿಸಿ, ದೇಹಸಾರ್ಥಕತ ಯನ್ನು ಮಾಡಿಕೊಂಡು, ಶಾಲಿವಾಹನ ಶಕ ೧೭೪೪ನೇ ಚಿತ್ರಭಾನು ಸಂವತ್ಸ

ರದ ಆಶ್ವೀನ ಶು। ೭ ದಿವಸ ಈ ಮರ್ತ್ಯಲೋಕವನ್ನು ಬಿಟ್ಟು, ಶ್ರೀ ಹರಿ ನಾಮೋಚ್ಚಾರಣೆ ಮಾಡುತ್ತ ಶಾಶ್ವಿತವಾದ ಲೋಕವನ್ನೈದಿದರು. ಈ ವಿಷ ಯದಲ್ಲಿ ಶ್ರೀಪ್ರಾಣೇಶ ದಾಸಾರ್ಯರ ಮಕ್ಕಳೂ, ಶಿಷ್ಯರೂ ಆದ ಶ್ರೀ ಗುರು ಪ್ರಾಣೇಶವಿಠ್ಠಲರು ರಚಿಸಿದ "ತೆರಳಿದರು ಪರಮ ತೋಷದಲಿ ಹರಿಪುರಕೆ" ಎಂಬುವ ಪದವು ಇದೇ ಪುಸ್ತಕದಲ್ಲಿ ಶ್ರೀ ಗುರು ಪ್ರಾಣೇಶ ವಿಠ್ಠಲ ಪದಗಳಲ್ಲಿ (೧೭)ನೇ ಪದ್ಯವಾಗಿ ಕೊಟ್ಟಿದೆ.

ಶ್ರೀಪ್ರಾಣೇಶ ದಾಸಾರ್ಯರಿಗೆ ಗುರು ಪ್ರಾಣೇಶ ದಾಸರೆಂಬ ಒಬ್ಬ ಮಕ್ಕಳಿದ್ದರೆಂದು ಮೇಲೆ ಬರೆದಿದೆಯಷ್ಟೇ! ಇವರ ಮೂಲ ಹೆಸರು ವೆಂಕಟ ದಾಸರು, ಶ್ರೀಪ್ರಾಣೇಶ ದಾಸಾರ್ಯರು ಚಿಕ್ಕಂದಿನಲ್ಲಿಯೇ ಇವರನ್ನು ತಮ್ಮ ಗುರುಗಳಾದ ಶ್ರೀ ಜಗನ್ನಾಥ ದಾಸಾರ್ಯರಲ್ಲಿ ಸೇವಾವೃತ್ತಿಗಾಗಿಡಲು, ಶ್ರೀ ವೆಂಕಟ ದಾಸರು ಸಂತತ (೧೨) ಹನ್ನೆರಡು ವರುಷ ತಮ್ಮ ಪರಮ ಗುರುಗಳ ಸೇವಾ ಮಾಡಿ, ಅವರ ಪೂರ್ಣಾನುಗ್ರಹಕ್ಕೆ ಪಾತ್ರರಾಗಿ, ಸಕಲ ವಿದ್ಯಾ ಸಂಪಾದಿಸಿಕೊಂಡು, ಶ್ರೀ ಜಗನ್ನಾಥ ದಾಸಾರ್ಯರ ಆಜ್ಞಾ ಪ್ರಕಾರ ತಮ್ಮ ಪಿತೃಗಳಾದ ಶ್ರೀಪ್ರಾಣೇಶ ವಿಠಲರಲ್ಲಿ "ಶ್ರೀಗುರು ಪ್ರಾಣೇಶ ವಿಠ್ಠಲ" ಎಂಬ ಅಂಕಿತವನ್ನು ತಗೆದುಕೊಂಡು ಭಗವದ ಪರೋಕ್ಷಿಗಳಾದರು ಈ ಮಹನೀಯ ರಿಗೆ ಶ್ರೀ ಜಗನ್ನಾಥ ದಾಸಾರ್ಯರು ಪರಮಾನುಗ್ರಹ ಮಾಡಿಕೊಟ್ಟ ತಂಬೂ ರಿಯು ಈಗ್ಯೂ ದಾಸಾರ್ಯರ ವಂಶಸ್ಥರಲ್ಲಿ ಇರುವದು ಮಹಾತ್ಮರೂ ದೇವಾಂಶರೂ ಆದ ಇವರೂ ಕೆಲವು ಪದಗಳನ್ನು ರಚಿಸಿರುವರು ಇನ್ನು ಮುಂದೆ ಅನೇಕ ಕೀರ್ತನಗಳನ್ನು ಮಾಡಬೇಕನ್ನುತ್ತಿರುವಷ್ಟರಲ್ಲಿ ಗುರು ಗಳಾದ ಶ್ರೀಪ್ರಾಣೇಶ ದಾಸಾರ್ಯರು ಬೇಡೆಂದು ಆಜ್ಞಾಪಿಸಿದ ಕಾರಣ ತಿರುಗಿ ಪದಗಳನ್ನು ರಚಿಸಲಿಲ್ಲ

ಶ್ರೀ ಗುರು ಪ್ರಾಣೇಶ ದಾಸಾರ್ಯರು ಕಲಕಾಲ ಲೌಕಿಕ ಕಾರ್ಯ ಗಳನ್ನು ಮಾಡುತಿದ್ದಾಗ್ಗೆ ಯಾವದೋ ಒಂದು ಕೆಲಸದ ಸಲುವಾಗಿ, ಅಶ್ವಾ ರೂಢರಾಗಿ ತಮ್ಮ ಕುಲಕರ್ಣಿ ಗ್ರಾಮವಾದ ರಾಮಪುರಕ್ಕೆ ಹೋಗುತ್ತಿರಲು, ಮಾರ್ಗದಲ್ಲಿ ನಿಬಿಡವಾದ ಈಚಲ ಪೊದೆಯೊಳಗಿಂದ ಒಂದು ವ್ಯಾಘ್ರವು ಬಂದು ಕುದುರೆಯನ್ನು ಹಿಂಸಿಸಿ, ಇವರಿಗೆ ಮಾತ್ರ ಸ್ವಲ್ಪಾದರೂ ತ್ರಾಸ

ಕೊಡವೆ ತಿರುಗಿಪೋಯಿತು ಆಗ್ಗ ಇವರ ತಲೆಯ ಮೇಲಿದ್ದ ರುಮಾಲವು ಕೆಳಗೆ ಬಿದ್ದಿತಂತ; ಅಂದಿನಿಂದಲೇ ಇವರು ಲೌಕಿಕವನ್ನು ಪೂರ್ಣವಾಗಿ ತ್ಯಜಿಸಿ, ಅನೇಕ ದೊಡ್ಡ ದೊಡ್ಡ ಜ್ಞಾನಿಗಳಿಂದಲೂ, ಮತ್ತು ಗೃಹಸ್ಥರುಗಳಿಂದಲೂ ಮರ್ಯಾದಿತರಾಗಿ ಸದಾಭಗವತ್ಪರರಾಗಿ ಇದ್ದರು

ಈ ಮಹನೀಯರು ತಮ್ಮ ಅವತಾರಕಾಲವು ಸಮಾಪಿಸಲು, ನಿರ್ಯಾಣಕ್ಕ ಆರು ತಿಂಗಳು ಮೊದಲಿಗೇಯೆ, ತಮ್ಮ ಚಿಕ್ಕ ಮಕ್ಕಳಿಗೆ :—"ನಾವು ಇಂದಿನಿಂದ ಆರು ತಿಂಗಳಿಗೆ ಸರಿಯಾಗಿ ಮಾಘ ಬ॥ ೩೦ ಅಮಾವಾಸಿ ದಿವಸ ನಿರ್ಯಾಣ ಮಾಡುತ್ತೇವೆ ನಮ್ಮ ಭೌತಿಕದೇಹ ಯಜ್ಞಕ್ಕೆ ಬೇಕಾಗುವ ಯಾಗಸ್ಥಳವನ್ನು ಶುಚಿರ್ಭೂತವನ್ನಾಗಿಮಾಡಿ, ಅಲ್ಲಿ ಗಚ್ಚಿನ ಕಟ್ಟೆಯನ್ನು ಕಟ್ಟಿಸಿ, ಶ್ರೀ ತುಳಸಿ, ಚಂದನಕಾಷ್ಠ ಮೊದಲಾದ ತಕ್ಕ ಯಜ್ಞದ್ರವ್ಯಗಳನ್ನು ಸಂಗ್ರಹಿಸಬೇಕು" ಎಂದು ಆಜ್ಞಾಪಿಸಿದರು ಅದರಂತೆ ಯಾವ ಯೋಚನೆ, ಮತ್ತೂ ಪ್ರಯತ್ನವಿಲ್ಲದೆ ಒಂದು ತಿಂಗಳು ಮೊದಲಿಗೇಯೇ ಸಕಲ ಸಾಮಾಗ್ರಿಗಳನ್ನು ಸಿದ್ಧಪಡಿಸಲು, ಶ್ರೀ ಗುರು ಪ್ರಾಣೇಶ ದಾಸಾರ್ಯರು ಶಕೆ ೧೭೮೨ ಗತಾಬ್ದ ರೌದ್ರಿ ಸಂವತ್ಸರದ ಮಾಘ ಬ॥ ೩೦ ಸೋಮವಾರ ದಿವಸ, ತಮ್ಮ ಶಿಷ್ಯರಿಂದ ಲಿಂಗಸೂಗೂರ ಕ್ಷೇತ್ರಕ್ಕೆ ೪ ಹರದಾರಿಯ ಮೇಲಿರುವ ಶ್ರೀ ಕೃಷ್ಣಾ ಭಾಗಿರಥಿಯ ಜಲವನ್ನು ತರಿಸಿ, ಸ್ನಾನವನ್ನು ಮಾಡಿ, ಊರ್ಧ್ವಪುಂಡ್ರಗಳನ್ನು ಧಾರಣಮಾಡಿ, ತಮಗೆ ಪರಮ ಪ್ರಿಯ ಶಿಷ್ಯರಾದ ಮತ್ತು ಅಪರೋಕ್ಷಜ್ಞಾನಿಗಳಾದ ಶ್ರೀ ಶ್ರೀಶ ಪ್ರಾಣೇಶ ವಿಠ್ಠಲಾಂಕಿತ, ರಾಮದಾಸರಿಂದ ಶಾಲಿಗ್ರಾಮ ತೀರ್ಥವನ್ನು ಪ್ರಾಶನ ಮಾಡಿ, ರಾಮದಾಸರ ಶಿರದಲ್ಲಿ "ಈ ಕರಗಳು ಹನ್ನೆರಡು ವರ್ಷಗಳ ವರೆಗೆ ಶ್ರೀ ಪರಮ ಗುರುಗಳಾದ ಶ್ರೀಜಗನ್ನಾಥದಾಸಾರ್ಯರ ಸೇವೆಯನ್ನು ಮಾಡಿರುವವು" ಎಂದು ಹೇಳಿ, ತಮ್ಮ ವರದ ಹಸ್ತವನ್ನಿಟ್ಟು ಪೂರ್ಣ ಅನುಗ್ರಹಿಸಿ, ಸರ್ವರಿಂದಲೂ ಅಪ್ಪಣೆಯನ್ನು ತಗೆದುಕೊಂಡು, ಯಾವ ತರದ ರೋಗೋಪದ್ರವಗಳಿಲ್ಲದೆ, ಸ್ಥಿರಾಸನದಲ್ಲಿ ಕುಳಿತು ಲಯದ ಚಿಂತನವನ್ನು ಬೆಳಸಿ, ದಿವದ್ವಿತಿಯ ಯಾಮವನ್ನು ಸಂಪೂರ್ಣ ನಿರೀಕ್ಷಣೆಮಾಡಿ, ತಮ್ಮ ನೇತ್ರಗಳೆರಡನ್ನೂ ಅಂಗೈ ಅಗಲು ವಿಸ್ತರಿಸಿ, ಶಿರೋರ್ಧ್ವದ್ವಾರದಿಂದ ವೈಕುಂಠಕ್ಕ

ತೆರಳುವರಾದರು. ಇವರಾದರೂ ಅನೇಕ ಮಹಾತ್ಮ್ಯಗಳನ್ನು ಪ್ರಕಟ ಮಾಡಿರುವರು. ಇವರು ಯಾತ್ರಾಮಾಡಿ ಸುಮಾರು (೬೬) ವರ್ಷಗಳಾದವು. ಇವರ ಹೆಸರನ್ನು ಚಿರಸ್ಥಾಯಿಕ ಮಾಡಲೋಸುಗ, ಇವರ ಪರಮ ಮಿತ್ರರೂ ಮಹನೀಯರೂ ಆದ, ವೇದಶಾಸ್ತ್ರಸಂಪನ್ನ ಕೃಷ್ಣಾಚಾರ್ಯಗಾರಲವಾಡ, ಇವರು ಶ್ರೀ ದಾಸಾರ್ಯರು ಯಾತ್ರಾಮಾಡಿದ ನಾಲ್ಕಾರು ವರುಷಗಳಲ್ಲಿಯೇ ಅವರು ಕೂಡ್ರುವ ಸ್ತಂಭದ ಬುಡದಲ್ಲಿ ಒಂದು ಸಣ್ಣದಾದ ಕಟ್ಟೆಯನ್ನು ತಾವು ಸ್ವತಃ ಕಟ್ಟಿ, ಅನೇಕ ವಿಧದಿಂದ ಪೂಜಾದಿಗಳನ್ನು ಮಾಡಿ, ದಾಸಾರ್ಯರ ವಂಶಸ್ಥರಿಗೆ ನಿರಂತರದಲ್ಲಿಯೂ ಪೂಜಿಸಲಿಕ್ಕೆ ಆಜ್ಞಾಪಿಸಿದರು. ಅದರಂತೆ ಅದ್ಯಾಪಿ, ಪ್ರತಿನಿತ್ಯದಲ್ಲಿ ಶ್ರೀ ದಾಸರಾಯರ ಸ್ತಂಭ ಮತ್ತೂ ಕಟ್ಟೆಗೆ ಪೂಜಾ ಆಗುತ್ತಲಿದೆ. ಪ್ರತಿ ವರುಷ ಮಾಘ ಬ॥ ೩೦ಕ್ಕೆ ಅನೇಕ ಜನರು ಕೂಡಿ, ವಿಜೃಂಭಣೆಯಿಂದ ದಾಸಾರ್ಯರ ಪುಣ್ಯತಿಥಿಯನ್ನು ನೆರವೇರಿಸಿ, ಅನ್ನಸಂತರ್ಪಣೆ ಭಜನಾದಿಗಳನ್ನು ಮಾಡುವರು. ಇಂತಹ ಭಗವದ ಪರೋಕ್ಷಿಗಳಾದ ಶ್ರೀ ಗುರು ಪ್ರಾಣೇಶ ದಾಸಾರ್ಯರಿಗೆ ಅನೇಕ ಶಿಷ್ಯರಾಗಿ ಹೋಗಿರುವರು ಅವರಲ್ಲಿ ಅವರ ಶಿಷ್ಯಾಗ್ರೇಸರರಾದ ರಾಮದಾಸರು ಗುರ್ವನುಗ್ರಹಕ್ಕೆ ಪಾತ್ರರಾದವರು.

ಇವರು ಶ್ರೀ ಗುರು ಪ್ರಾಣೇಶ ದಾಸಾರ್ಯರ ಸೋದರಳಿಯಂದಿರು, ಅಂದರೆ ಶ್ರೀಪ್ರಾಣೇಶ ದಾಸಾರ್ಯರ ಅಣ್ಣಂದಿರಾದ ರಾಘಪ್ಪನವ ಪೌತ್ರರು; ಶ್ರೀಪ್ರಾಣೇಶ ದಾಸಾರ್ಯರು, ತಮ್ಮ ಅಣ್ಣಂದಿರ ಪುತ್ರಿಯಾದ ಹಿರೆ ವೆಂಕಮ್ಮನವರಿಂದಲೇ ತಮ್ಮ ಗುರುಗಳಾದ ಶ್ರೀಜಗನ್ನಾಥ ದಾಸಾರ್ಯರ ಸೇವೆಯನ್ನು ಮಾಡಿಸುತ್ತಿದ್ದರಂತೆ; ಹೆಚ್ಚಿಗೇಕ ಪರಮ ಪೂಜ್ಯ ಜಗನ್ನಾಥ ರಾಯರೂ ಸಾಯಂಕಾಲದ ಭಜನಾಸೇವಾದಿಗಳಲ್ಲಿ ಅನುಗ್ರಹಿಸಿ, ಹಿರೆ ವೆಂಕಮ್ಮನವರಿಂದಲೇ ಪದಪದ್ಯಗಳನ್ನು ಹಾಡಿಸುತಿದ್ದರಂತೆ; ಈ ಪ್ರಕಾರ ಪತಿಪತ್ನಿಯರು ಸೇವಾಮಾಡುತ್ತಿರಲು, ಅವರ ಪ್ರಸಾದದಿಂದಲೇಯೆ ಹಿರೆ ವೆಂಕಮ್ಮನವರು ರಾಮದಾಸರೆಂಬುವ ಓರ್ವ ಪುತ್ರರತ್ನವನ್ನು ಪಡೆದರು ಈ ರಾಮದಾಸರ ಮೈಬಣ್ಣವು ಕಪ್ಪಾದದ್ದು; ತೇಜೋಮಯರಾಗಿ ಶಾಲಿಗ್ರಾಮ ಶಿಲೆಯಂತ ಶೋಭಿಸುತ್ತಿದ್ದರು ಇವರು ಪೂರ್ವವಯಸ್ಸಿನಲ್ಲಿ

ಯಾರಲ್ಲಿಯೂ ವಿದ್ಯಾಭ್ಯಾಸ ಮಾಡಲಿಲ್ಲ. ಅತಿ ಹುಡುಗಾಟಿಕೆಯಿಂದ ಕತ್ತೆ ನಾಯಿಗಳನ್ನು ಹಿಡಿದು ಅವುಗಳೊಂದಿಗೆ ಆಟಗಳನ್ನಾಡುವರು. ಈ ಸ್ಥಿತಿಯು ಸುಮಾರು ೨೦-೨೫ ವರ್ಷಗಳ ವರೆಗೆ ಇರಲು, ಒಂದು ದಿನ ಇವರ ಸೋದರ ಮಾವಂದಿರಾದ ಶ್ರೀ ಗುರು ಪ್ರಾಣೇಶ ವಿಠಲರು ದೇವಾತಾರ್ಚನಯ ಉದ್ದಿಶ್ಯ ಗಂಧ ತೆಗಿಯುವ ಕಾಲದಲ್ಲಿ: "ಇದೇನು ನಿನ್ನ ಆಟವೆಂದು" ರಾಮದಾಸರಿಗೆ ಕೈಯಲ್ಲಿ ಇದ್ದ ಗಂಧದ ಕೊರಡಿನಿಂದ ಭರದಿಂದ ಒಗೆಯಲು, ಅದರ ಪೆಟ್ಟು ತಲೆಗೆ ತಗಲಿ, ರಕ್ತಸ್ರವಿಸಲಿಕ್ಕೆ ಹತ್ತಿತು; ಆಗ್ಗೆ ಶ್ರೀ ಗುರು ಪ್ರಾಣೇಶ ವಿಠಲ (ವೆಂಕಟ ದಾಸರ) ಧರ್ಮಪತ್ನಿಯರಾದ ವರದೇಂದ್ರಮ್ಮನವರು ರಾಮದಾಸರನ್ನು ಸಮಾಧಾನಗೊಳಿಸಿ, ರಕ್ತ ಸ್ರವಿಸುವ ಸ್ಫೋಟನ ದ್ವಾರವನ್ನು ನಿಬಂಧಿಸಬೇಕಂದರು; ಆಗ್ಗೆ ಶ್ರೀ ಗುರು ಪ್ರಾಣೇಶ ದಾಸಾರ್ಯರು ಬೇಡೆಂದು ಹೇಳಲು, ಕೆಲವು ವೇಳಯಲ್ಲಿ ರಕ್ತಸ್ರಾವವು ತನ್ನಷ್ಟಕ್ಕೆ ತಾನೆ ಕಡಿಮೆಯಾಗಿ, ರಾಮದಾಸರಿಗೆ ಪೂರ್ವಜನ್ಮ ಸುಕೃತದಿಂದ ಜ್ಞಾನೋದಯವಾಯಿತು. ಇಷ್ಟಾದ ಬಳಿಕ ಶ್ರೀ ವೆಂಕಟ ದಾಸರು (ಗುರು ಪ್ರಾಣೇಶ ವಿಠಲರು) ಇವರಿಗೆ ಸ್ನಾನಾದಿಗಳನ್ನು ಮಾಡಿಸಿ—"ಶ್ರೀಶ ಪ್ರಾಣೇಶ ವಿಠ್ಠಲ ಎಂಬುವ" ಅಂಕಿತವನ್ನು ಪ್ರದಾನಮಾಡಿದರು ಅಂದಿನಿಂದ ಇವರು ದಿನೆದಿನೇ ಗುರುಗಳ ಸೇವೆಯಲ್ಲಿ ಹೆಚ್ಚು ತತ್ಪರರಾಗಿ ಅತಿ ದೃಢವಾದ ಗುರುಭಕ್ತಿಯನ್ನು ಪ್ರಕಟಿಸಿ ಗುರ್ವನುಗ್ರಹದಿಂದ ಭಗವದ ಪರೋಕ್ಷಿಗಳಾದರು ಮತ್ತು ದೇಶದೇಶಗಳಲ್ಲಿ ಸಂಚರಿಸಿ, ಅನೇಕ ಭಗವದ್ದಾಸರಿಂದ ಮರ್ಯಾದಿತರಾಗಿ ಅನೇಕ ಶಿಷ್ಯವರ್ಗಕ್ಕೆ ಶ್ರೀಹರಿ ನಾಮಾಮೃತವನ್ನಿತ್ತು ಉದ್ಧಾರಮಾಡಿದರು ಈಗಲೂ ಇವರ ಶಿಷ್ಯರುಗಳು ಎಷ್ಟೋ ಕಡೆಯಲ್ಲಿರುವರು

ಇವರು ಶ್ರೀ ಗುರುರಾಜರ ದರ್ಶನಕ್ಕೆಂದು ಪ್ರತಿ ವರುಷ ಶ್ರೀಮನ್ ಮಂತ್ರಾಲಯಕ್ಕೆ ಹೋಗುತ್ತಿದ್ದರಂತೆ; ಆ ಕಾಲದಲ್ಲಿ ಇವರು ಗುರ್ವನುಗ್ರಹದಿಂದ ಅನೇಕ ಮಹಾತ್ಮ್ಯಗಳನ್ನು ತೋರಿರುವರು. ಅವೆಲ್ಲವನ್ನು ಇಲ್ಲಿ ವಿಶದೀಕರಿಸಲು ಸಾಧ್ಯವಿಲ್ಲ ಇವರು ಅನೇಕ ಜನರ ರೋಗೋಪದ್ರವಾದಿಗಳನ್ನು ಭಗವಂತನನ್ನು ಪ್ರಾರ್ಥಿಸಿ ದೂರಮಾಡಿರುವರು ಮತ್ತು ಯಾವಾ

ಗಲೂ ಮೂಕಬಧಿರರಂತೆ ಇದ್ದು ಗೌಪ್ಯವಾಗಿ ಭಗವನ್ನಾಮಸ್ಮರಣೆಯನ್ನು ಮಾಡುವರು. ಯಾರಾದರು ಇವರಿಗೆ ಹೆಚ್ಚಿಗೆ ದ್ರವ್ಯಾನುಕೂಲ ಮಾಡಿಕೊಡಲು, ಅಂದಿನ ದಿನದ ದೇವರ ನೈವೇದ್ಯಕ್ಕೆ ಬೇಕಾದಷ್ಟು ಸ್ವೀಕರಿಸಿ ಹೆಚ್ಚಾದ್ದನ್ನು ಹಿಂದಕ್ಕೆ ಕೊಡುವರು ಈ ಪ್ರಕಾರ ಸತ್ಕಾಲ ಕ್ಷೇಪಮಾಡುತ್ತಿರಲು, ಒಂದು ವರುಷ ಶ್ರೀ ಮನ್ಮಂತ್ರಾಲಯಕ್ಕೆ ಹೋಗುವ ದಕ್ಕೆ ಗುರುರಾಜರ ಆಜ್ಞೆಯಾಗದಿದ್ದರೂ, ತಮ್ಮ ಪತ್ನಿಯವರ ಆಗ್ರಹದಿಂದ ಸ್ವಗ್ರಾಮವಾದ ಲಿಂಗಸೂಗೂರಿಂದ ತೆರಳಿದರು ಮಾರ್ಗದಲ್ಲಿ ಕುದು ರೆಯು ಬೆದರಲು ಅದರ ಮೇಲಿಂದ ಬಿದ್ದದಕ್ಕಾಗಿ, ಇವರ ಕಾಲುಗಳಿಗೆ ವಿಶೇಷವಾಗಿ ಪೆಟ್ಟುತಗಲಿ ವಿಸ್ಮೃತಿಯಾಯಿತು. ಅದೇ ವಿಸ್ಮೃತಿಯ ಲ್ಲಿಯೇ ಗುರುರಾಜರು ಮರಳಿ ನೀನು ನಿನ್ನ ಸ್ಥಳಕ್ಕೆ ಹೋಗೆಂದು ಆಜ್ಞಾಪಿ ಸಲು, ಹಾಗೇ ತಿರುಗಿ ಬರುವವರಾದರು ಅಂದಿನಿಂದ ಅವರ ಎರಡೂ ಕಾಲುಗಳು ಹೋಗಿ ನಡೆಯಲು ಬಾರದಂತಾಯಿತು ಇಂತಹ ಸ್ಥಿತಿಯ ಲ್ಲಿಯೇ ಎಷ್ಟೋ ವರ್ಷಗಳ ವರಿಗೆ, ಪುನಃ ಮಂತ್ರಾಲಯ ಯಾತ್ರಮಾಡು ವಾಗ್ಗೆ ಮಹನೀಯರಾದ ಕೆಲವು ದಾಸವರ್ಯರುಗಳು ಪ್ರತಿಮಯಂತ ಇವರ ಪೂಜಾದಿಗಳನ್ನು ಮಾಡುವರು ಮತ್ತು ದಾಸವರ್ಗಕ್ಕೆ ಸೇರಿ ಅಪರೋಕ್ಷಿ ಗಳೆನಿಸದ ಭಕ್ತರುಗಳು ಇವರನ್ನು ಎತ್ತಿಕೊಂಡು ತಿರುಗಾಡುವರು ಹೀಗೆ ರಾಮದಾಸರು ಸನ್ಮಾನಿತರಾದರು; ಮತ್ತು ಕಾಲು ಇಲ್ಲದಾಗಲೆ ಇವರು ಪ್ರತಿನಿತ್ಯ ಶ್ರೀ ವರದೇಂದ್ರ ಸ್ವಾಮಿಗಳ ಮಠವನ್ನು ತಾವೇ ಸ್ವಂತ ಉಡುಗು ವರು; ತಮ್ಮ ಗುರುಗಳು ಕುಳಿತು ಭಜನಾದಿಗಳನ್ನು ಮಾಡಿದ ಸ್ಥಳದಲ್ಲಿ ಎಂದಿಗೂ ಕೂಡ್ರರು. ಹೀಗೆ ಒಂದಲ್ಲ, ಅನೇಕ ಭಾಗವತ ಧರ್ಮಗಳನ್ನು ಆಚರಿಸಿ, ಅತಿ ವಿಮಲವಾದ ಕೀರ್ತಿಯನ್ನು ಸಂಪಾದಿಸಿ, ಶಕ ೧೮೧೪ ನಂದನ ನಾಮಸಂವತ್ಸರದ ಭಾದ್ರಪದ ಶು। ೮ ದಿವಸ ಪರಲೋಕಯಾತ್ರೆ ಯನ್ನು ಬೆಳಿಸಿದರು

ಈ ಸಂಕ್ಷಿಪ್ತವಾದ ಚರಿತ್ರೆಗಳು, ಶ್ರೀ ಗುರು ಪ್ರಾಣೇಶ ದಾಸಾರ್ಯರ ದೌಹಿತ್ರರಾದ ಮ। ರಾ। ಹನಮಂತರಾವ ಕುಲಕರ್ಣಿ ಕೆಲೂರ ಇವರಿಂದ ತಿಳಿದಿರುತ್ತವೆ ಈ ಪರಮ ಪಾವನವಾದ ಚರಿತ್ರೆಗಳನ್ನು ಓದಿ, ಮತ್ತು

ಕೇಳಿ ಭಗವದ್ಭಕ್ತರು ಆನಂದಿಸಲೆಂದು ಶ್ರೀ ಪರಮಾತ್ಮನನ್ನು ಪ್ರಾರ್ಥಿಸಿ, ಶ್ರೀ ದಾಸಾರ್ಯರುಗಳ ಸಂಕ್ಷಿಪ್ತ ಅವತಾರ ಚರಿತ್ರೆಯನ್ನು ಮುದ್ಗುರುವಂತರ್ಗತ ಶ್ರೀ ವರದೇಂದ್ರ ಶೀ ರಾಘವೇಂದ್ರ ಗುರ್ವಂತರ್ಯಾಮಿ ಶ್ರೀ ಮಧ್ವೇಶನಿಗೆ ಅರ್ಪಿಸುವೆನು

ಸಜ್ಜನ ವಿಧೇಯ,

ಹನಮಂತರಾವ ಕುಲಕರ್ಣಿ ಗೊರಾಬಾಳ,

**ವಕೀಲ, ಲಿಂಗಸೂಗೂರ**



# ವಿಷಯಾನುಕ್ರಮಣಿಕೆ

ಈ ಪ್ರಕಾರ ಬಹು ಶ್ರಮದಿಂದ ತಾರತಮ್ಯ ಕ್ರಮಾನುಸಾರವಾಗಿ ಪದಗಳನ್ನು ಕ್ರೋಡೀಕರಿಸಿ, ಸಂಗ್ರಹಿಸಲ್ಪಟ್ಟಿದೆ. ಶ್ರೀಪ್ರಾಣೇಶ ದಾಸಾರ್ಯರ ಪದಗಳಲ್ಲ ಮಾತ್ರ ತಾರತಮ್ಯವಾಗಿ ಕ್ರೋಡೀಕರಿಸುವಲ್ಲಿ, ವಾಯುದೇವರ ಪದಗಳಲ್ಲಿ ದ್ವಾದಶಸೂರ್ಯರ ಹೆಸರುಗಳು, ೫೩ನೇ ಪದ್ಯ ಬಂದಿರುವದು. ಆದರೆ ಇದು ನೋಡಲಿಕ್ಕೆ ಬರತಕ್ಕದ್ದು. ಮತ್ತು ಕೆಲವು ಉಗಾಭೋಗಗಳು (೨೪೯–೨೫೦)ನೇ ಪದಗಳು ಹಿಂದಿನಿಂದ ದೊರೆತ ಕಾರಣ ಕಡೇಗೆ ಕೊಟ್ಟಿದೆ ಇದರಲ್ಲಿ ಏನಾದರೂ ದೋಷವಿದ್ದರೆ ಕ್ಷಮಿಸುವದೆಂದು ವಿಜ್ಞಾಪನೆ. ಮತ್ತು ಶ್ರೀಪ್ರಾಣೇಶ ವಿಠಲರ ಕೀರ್ತನಗಳು ೨೫೨ಕ್ಕೆ ಅಕ್ಷರಾನುಕ್ರಮಣಿಕಾ ಕೊಟ್ಟಿರುವೆವು. ಶ್ರೀಗುರುಪ್ರಾಣೇಶ ವಿಠಲರ ಕೀರ್ತನಗಳು, ಶ್ರೀಶಪ್ರಾಣೇಶ ವಿಠಲರ ಕೀರ್ತನಗಳು, ಸ್ವಲ್ಪೇ ಇರುವವು ಮತ್ತು ಶ್ರೀವರದೇಂದ್ರ ಸ್ವಾಮಿಗಳವರ ಆಖ್ಯಾನ ದಲ್ಲಿಯೂ ಸ್ವಲ್ಪ ಪದ್ಯಗಳಿರುವಕಾರಣ ಅಕ್ಷರಾನುಕ್ರಮಣಿಕೆಯನ್ನು ಕೊಟ್ಟಿಲ್ಲ.

ಪ್ರಕಾಶಕ.

ಹರಿಃ ಓಂ

# ಶ್ರೀಪ್ರಾಣೇಶ ವಿಠಲ ವಿರಚಿತ ಕೀರ್ತನಗಳ

## ಅಕ್ಷರಾನುಕ್ರಮಣಿಕೆ.

### ಅ



### ಆ



### ಇ

## ಈ



## ಉ



## ಎ



## ಏ



## ಒ



## ಕ

# ಗ



# ಘ

## ಚ



## ಜ



## ತ



## ಥ

## ದ



## ಧ



## ನ



## ಪ

## ಫ



## ಬ

## ಭ



## ಮ



## ಯ

## ಹ



## ಕ್ಷ

॥ श्री: ॥

॥ ಶ್ರೀರಾಮಚಂದ್ರ ಪ್ರಸನ್ನಃ ॥

ಶ್ರೀಮಧ್ವರಾಜ ಗುರುಭ್ಯೋ ನಮಃ

" शृण्वन्गृणन्संस्मरयंश्च चिंतयन् ।
नामानिरूपाणि च मंगलानिते ॥
क्रियासुयस्त्वच्चरणारविंदयोः ।
आविष्टचित्तो न भवाय कल्पते ॥ "

ಶ್ರೀಮಜ್ಜಗನ್ನಾಥದಾಸಾರ್ಯರ
ಪರಮ ಪ್ರಿಯ ಶಿಷ್ಯರೂ ಅಪರೋಕ್ಷಜ್ಞಾನಿಗಳೂ

# ಶ್ರೀಪ್ರಾಣೇಶ ವಿಠಲರ ಕೀರ್ತನ.

## (೧) ಜಗನ್ನಾಥರಾಯರ ಸ್ತುತಿ

೧. ರಾಗ–(ಆದಿತಾಳ).

ತಂಗಿನೋಡಿದೆಯೇನಿಂದು । ಕಂಗಳುದಣಿಯ ಗುರು, ರಂಗನೊಲಿದ ದಾಸರಾಯರ ॥ ಪ ॥ ಶ್ರೀಪತಿಯೊಲಿಯಲೆಲ್ಲ ಪ್ರಾಪುತಿಯೆಂಬುವ ಪ್ರಮಾಣ–ವೀಪುರುಷರಲ್ಲಿಯೇ ಒಪ್ಪುವದೇ ತಂಗಿ ನೋಡಿದೆನೆ ॥ ಶಾಪಾನುಗ್ರಹಸಮರ್ಥರೀಪೊಡವಿಯೊಳು ನಿತ್ಯ । ಕಾಪಾಡುವರೆಮ್ಮನೆಲ್ಲರ–ತಂಗಿ ॥ ೧ ॥ ಶಿಖಿಯೊಳಿದ್ದ ಪೀಯೂಷ । ಸುಖದಿ ಪಿತೃಗಳುಂಡರು, ಅಕಟಾ ಕಾಣರೀ ಜನವೆಂದೂ ॥ ತಂಗೀ ॥ ಸಕಲಗ್ರಂಥವಶೋಧಿಸಿ ಯುಕುತಿಯಿಂ ಹರಿಕಥಾಮೃತ । ಸಕಲರಿಗಿತ್ತು ಸಲಹುವರೇ ॥ ತಂಗಿ ॥ ೨ ॥ ಕಾಶೀಪ್ರಯಾಗವಾರಣಾಸಿಯಿಂದಧಿಕ ಹರಿ । ದಾಸರಾಯರಿದ್ದಾಸ್ಥಾನವೂ ॥ ತಂಗಿ ॥ ನಾಶವಾಗುವ ದಘ ಮನವಿಾಸಲಾಗುವುದು ಶ್ರೀಪ್ರಾಣೇಶವಿಠ್ಠಲ ಕೈಸೇರುವ ॥ ೩ ॥

೨. ರಾಗ–ಸಾವೇರಿ (ತ್ರಿಪುಡೆ ತಾಳ).

ತಿಳಿಯನು ಎಂದೆಂದಿಗನ್ಯ । ರಂಗ ಒಲಿದ ದಾಸರು ಜಗನ್ಮಾನ್ಯ ॥ ಅಲವ ಮಹಾತ್ಮರೆಂಬ ಪುಣ್ಯ–ಕೀರ್ತಿ–ಗಳ ನಿತ್ಯ ಕೇಳ್ವ ನರಧನ್ಯ ॥ ಪಲ್ಲ ॥ ಹಿರಣ್ಯಕಶ್ಯಪುಜ ಸಹ್ಲಾದನೆವೇ ಎರಡನೆ ಜನ್ಮ ಶಲ್ಯನಾದ । ಗುರುವಾದಿ ರಾಜರನರ್ಚಿಸಿದ ಪುರಂದರದಾಸರಾಯರಲ್ಲುದಿಸಿದ ॥ ೧ ॥ ಅಧ್ವನೆಯ ರೂಪ ವೀಗಿಂದಂತೆ । ಬಹದು ಏಳು ಜನ್ಮ ಮುಂದಂತೆ ॥ ಮೋದಾಭಿವೃದ್ಧಿ ಗೇನೋ ಅಂತೇ ಎಂಬ ವಾದಿಗಿದೆಲ್ಲ ಅಂತಿಗಂತೆ ॥ ೨ ॥ ದಾಸಕೂಟಸ್ಥರಿಗೀ ಮಾತು–ಕೆಲವು–ದೇಶಗಳಲ್ಲಿ ಅನುಭವವಾಯ್ತು । ಈಸುಕಥಾಲಾಪವಲ್ಲಾತ್ರೀ ಶ್ರೀಪ್ರಾಣೇಶ ವಿಠಲನಲ್ಲಿಹನಾತು ॥ ೩ ॥

---

## (೨) ವಿಜಯರಾಯರ ಸ್ತುತಿ

೩. ರಾಗ–ಶಂಕರಾಭರಣ (ಏಕತಾಳ).

.ಯರಾಯರಂಘ್ರಿಜಲಜವ–ಭಜಿಸಿ ಜನರು–ತಡೆಯದಲೆ ॥ ಜವಾ ., ॥ ಪಲ್ಲವಿ ॥ ಕುತರ್ಕಗಿರಿಗಳ । ಹತರ್ಸುಗೈಸಿದ । ಶತಕೃತಾಖ್ಯರ ಸುತರಾದ ಗುರು–ವಿಜಯರಾಯ ॥ ೧ ॥ ವಸುಧೆಯೊಳಗನ್ಯವೇಷದಿಂ ಚರಿಸಿದ । ಲೇಸಾಗಿ ಸಾರಥಿಶ್ರೀಶನಾದಾ–ಗುರು ॥ ೨ ॥ ಖ್ಯಾತಿಯಿಂ ಲೋಕದಿ, ವಾತಜನ್ನೊಲಿಸಿದ । ದಾತನ ಅರಿಯುಜಗನ್ನಾಥನುಳಿದು, ಗುರು ॥ ೩ ॥ ದುಷ್ಟರ ಜರಿದ, ವಿಶಿಷ್ಟರ ಪೊರೆದ, ಶ್ರೀಕೃಷ್ಣನ ಸಖನೋರ್ವ ಸೃಷ್ಟಿಯೊಳಗೆ । ಗುರು ॥ ೪ ॥ ಈಶಗೊಲಿದ ತುರು–ಗಾಸ್ಯನಾಳುಗಳೊಳು ಈಸುಗುಣಿಗೆ ಕಾಣೆನಾಸರಿಯಾ, ಗುರು ॥ ವಿಜಯರಾಯ ॥ ೫ ॥ ತಾತನಾಲಯಕ್ಕೈದಿ । ನೂತನವಿದ್ಯಂಗಳಾತುರದಲಿ ಯ್ಯೈದಿದಾತನೀತ, ಗುರು ॥ ವಿಜಯ ॥ ೬ ॥ ಪ್ರಾಣೇಶ ವಿಠಲನು ತಾನುಡಿಸದೆ ತುಟಯನು ಹೊಂದಿಸರಜನ್ಹಾಣುವೆನುವ ॥ ಗುರು ॥ ವಿಜಯರಾಯ ॥ ೭ ॥

## (೩) ಶ್ರೀಧರ ತೀರ್ಥರ ಸ್ತುತಿ.

೪. ರಾಗ-ಕಾಪಿ (ಅಟತಾಳ).

ಚಿರಕಾಲಾಮರೆಯೆ । ನಿಮ್ಮ ಸ್ಮರಣೆ ॥ ಶ್ರೀಧರತೀರ್ಥಗುರುರಾಯ ಧೊರೆಯೆ ॥ ಪ ॥ ಭವದೂರ, ವೀತ-ವಿಷಯಸಂಗ ಅವನಿಯೊಳುಖ್ಯಾತ ॥ ತವಕದಿಂದಲಿ ಲಾಲಿಸುವದೆನ್ನಮಾತ । ಭುವನೇಂದ್ರಯತಿಕರಕಮಲಸಂಜಾತ ॥ ೧ ॥ ಮೃದಸಮಹೇಮಾ-ದಿಗಳನು-ಮಾಡಿದ ಜಿತಕಾಮ ॥ ಬುಧಜನವಂದ್ಯ ಸದ್ಗುಣಗಣಧಾಮ । ಮುದತೀರ್ಥಮತಪಾರಾವಾರಸುಸೋಮ ॥ ೨ ॥ ಪತಿತಪವಿತ್ರ-ದಯಾಂಬುಧೇ-ಶತಪತ್ರನೇತ್ರ ॥ ವಿತರಣೆಯಲಿ ರವಿಜನೆ ಶುಭಗಾತ್ರ । ಪತಗಾಭ, ದಂಡಾದಿಧರ ಸುಚರಿತ್ರ ॥ ೩ ॥ ನತಸುರಮಣಿಯೆ-ನೀವಲ್ಲದೆ, ಇತರಿಗೆ ಮಣಿಯೇ ॥ ಪ್ರತಿವಾದಿ ಮಹಾತಿಮಿರಕೆದಿನಮಣಿಯು, ಮತಿಯಪಾಲಿಸೋ ದುಃಖಪೃಷದಶ್ವಫಣಿಯೇ ॥ ೪ ॥ ಯಾಕೆನ್ನ ಕೀಳು-ಬುದ್ಧಿಯ ಕಳೆದು-ಜೋಕೆಯಿಂದ ಆಳು ॥ ನೀಕಯ್ಯಬಿಡಲು ನಾಕುವರಿಲ್ಲ ಕೇಳು ॥ ಶ್ರೀಕಾಂತಪ್ರಾಣೇಶ ವಿಟ್ಠಲನ ಆಳು ॥ ೫ ॥

## (೪) ಭುವನೇಂದ್ರ ತೀರ್ಥರ ಸ್ತುತಿ.

೫. ರಾಗ-ಭೈರವಿ (ಆದಿತಾಳ).

ಗುರುಗಳ ನೋಡಿರೈ-ಉತ್ತಮ ವರಗಳ ಬೇಡಿರೈ ॥ ಪ ॥ ದುರುಳತಿಮಿರದಿನಕರ, ಶರಣರಸುರತರು, ವರದೇಂದ್ರರ ಕರಪಂಕಜರುಹ ॥ ಪ ॥ ಮಂಗಳ ವಿಗ್ರಹ ಮಧ್ವಮತಾಂಬುಧಿಸೋಮ-ಸದ್ಗುಣಧಾಮ ॥ ಪಿಂಗಳನಿಭ ಸಂನ್ಯಾಸಕುಲೋತ್ತಮನೀತಾ-ಲೋಕವಿಖ್ಯಾತಾ ॥ ಸಂಗರಹಿತ ಕೌಪೀನ ಕಮಂಡುಲಧರ-ದೋಷವಿದೂರ । ಮಂಗಳೆಪತಿ ಪದಭಜಕ, ಅಘೋರ ಗವೀಂದ್ರ ಶ್ರೀಭುವನೇಂದ್ರ ॥ ೧ ॥ ಜನ್ಮಾರಭ್ಯವು ಲೌಕಿಕಸ್ವಪ್ನದೊಳರಿಯ-ಭೂಸುರವರ್ಯಾ । ಸುಮ್ಮನೆ ಈ ಪರಿ ಪದವಿಯು ಜಗದೊಳು ಬಹುದು ಆರಿಗೆ ಅಹುದೂ । ಬೊಮ್ಮನ ಸಂತತಿಯಿದು ಪುಸಿಯಲ್ಲವು ಸತ್ಯಾ-ಭಜಿಸಿರಿಸಿತ್ಯಾ ॥

ಯಮ್ಮ ಬಳಿಯೊಳಿಹ ದುಷ್ಟಮತೇಂಧನ ದಾವಾ,–ಸೌಖ್ಯವನೀವ ॥ ಗುರುಗಳ ॥ ೨ ॥ ಧಾರಿಣಿಯೊಳು ವಿಸ್ತರಿಸಿದ ಸ್ವಮತವ ಧೀರಾ ಗುಣಗಂಭೀರಾ ಆರಿಂದೊಶ ಚರಿತೆಯ ಪೂರ್ತಿಸಿ । ಪೇಳ್ವುದಕೆ–ಬಹುಸುಖ ಮನಕೆ ॥ ಶ್ರೀರಾಘವೇಂದ್ರರನುಗ್ರಹ ಪಾರಾವಾರದೊಳಗೆ ವಿಹಾ ರಾ ॥ ಘೋರಿಸುತಿಹ ಸಂಸಾರ ಸಮುದ್ರಕೆ ಮುನಿಯೂ ಯತೀಶಿರೋಮಣಿಯೂ ॥ ೩ ॥ ಚಿರಕಾಲದ ಸುಕೃತದೊರಕಲು ವದಗುವುದೂ, ಸೇವೆಯಿವರದು । ಮರಳ್ಯೊಂದ್ಯೊಚಿಸದಲೆ–ಶರಣಾಗತರಾಗಿ–ಚಿಂತೆಯನೀಗೀ ॥ ಎರವಿಲ್ಲದೆ ದುಃಖವ ಪರಿಹರಿಪರು ಹತ್ತೇ ಕರೆವರು ಮತ್ತೇ । ಸಿರಿ ಪೂರ್ಣಾಯು ಸುತಾದಿ ವಿಷಯಗಳ ಕೊಡುವ–ದುರಿತವತರಿವ ॥ ೪ ॥ ತವಕದೊಳಿವರ ಪದಾಬ್ಜವ ಸೇವಿಪಭಕ್ತಾ ಜೀವನ್ಮುಕ್ತಾ । ಕುವಲಯದೊಳಗೀಗಿವರಿಗೆ ಸರಿಯಾರಿಲ್ಲಾ–ಕೇಳಿರಿಸೊಲ್ಲಾ ॥ ಅವನೀಶರು ಎಂಬಾಹ್ವಯ ತಿಳಿಯಲಿಕುಂಟೇ–ಅಧಿಕರೂವುಂಟೇ ॥ ಇವರಿಗೆ ರಗದಿರೆ ಒಲಿಯನು ಶ್ರೀಪ್ರಾಣೇಶ–ವಿಠಲನು ಲೇಶ ॥ ೫ ॥

## ೬. ರಾಗ–ಪಾರ್ಥಿಕ (ಷಟ್ಪದಿ).

ಶ್ರೀಮಧ್ವಮತವೆಂಬ ಕ್ಷೀರಪಾರಾವಾರ । ಸೋಮನೆನಿಸುತಿಹ ವರದೇಂದ್ರಕರಸಂಜಾತ । ನೀಮಹಿಯೊಳಾವಾವ ಪರಿಕಾಣಿಸುವ ನೋಡಿ ರಾಮಪದ ಜಲಜಭೃಂಗ ॥ ಪ ॥ ಕುಂಡಲಿಯೊ ಭಾರತಿಯೊ ಈಶನೊ ಎಂದು ದ್ವಿಜಷಂಡ ತುತಿಸುವದು ಶ್ರೀ ಭುವನೇಂದ್ರ ರಾಯರ । ಕಂಡು ಪದಯುಕ್ತ ಪುರುಷಾಕಾರ ಶಿಖಾರಹಿತ ಕೂಡದಿದುಯೆನಲು ಪೇಳ್ವೆ ॥ ಪಂಡಧರ ಯೋಗ ದಾರ್ಢ್ಯದೊಳುತಾ ಅಹಿಯಂತೆ । ಪಂಡಿತೇಶನು ವಾಗ್ಬಲದಲಿ ಭಾರತಿಯಂತೆ । ರುಂಡಮಾಲಿಯ ತೆರದಿ ತೋರುವರು ವೈರಾಗ್ಯದಲಿ ನಿರುತ ಭಜಿಸುವರಿಗೆ ॥ ೧ ॥ ವಿಧಿಯೊ ಅರ್ಕನೊ ಇಂದ್ರನೋ ಎಂಬ ತೆರದಿಂದ । ಬುಧಜನಕೆ ತೋರ್ವ ನಾಲ್ಮೊಗ ಖಗ ಸಹಸ್ರಾಕ್ಷ । ಇದು ಯೆಂತು ಸಾಮ್ಯವನೆ, ಸರ್ವಜನರ ಯೋಗ್ಯತೆಯರಿವಂತೆ ಧಾತನಂತೇ ॥ ಮದಡ ಜ್ಞಾನಾಖ್ಯ ತಮವಳಿವಲ್ಲಿ ರವಿಯಂತೆ । ಪದುಮೇಶನ ಗುಣವ ವಿಚಾರಿಸಲನೇಕಾಕ್ಷ ॥ ಚದುರನೆನುವ ಬಗೆಯಿಂದೊಪ್ಪುತಿಹ ನಮ್ಮ ಗುರುವ ತುತಿಸುವೊದಕ್ಕೆನ್ನ ವಶವೆ ॥ ೨ ॥

ಕಡಲೋ ಸುರಧೇನುವೋ ಹಂಸನೋ ಯೆಂಬಂತೆ । ಪೊಡವಿಗೆ ವಿರಾಜಿಸುವ ಉದಕಮುಯುವಾಗಿಹದು । ಕಡು, ಚತುಷ್ಪಾದಿ ಅಂಡಜಜಂತು ಈ ಸಾಮ್ಯ ಸಲ್ಲದೆನೆ ಸಲ್ಪವಿವರ ॥ ಒಡಲಿನೊಳು ಪ್ರಾಣೇಶವಿಠಲಮಣಿ ಪೊಳೆವುತಿದೆ । ಕೊಡುವ ಬೇಡಿದವರವ ಅಮರರಾಕಳಿನಂತೆ । ಕುಡಿವಂತೆಹಂಸ ಪಯಜಲ ವುಳಿದು, ದೋಷವೆಣಿಸದೆ ಬಿನ್ನಪವಲಾಲಿಪ ॥ ೩ ॥

## (೫) ವರದೇಂದ್ರತೀರ್ಥರ ಸ್ತುತಿ.

೭. ರಾಗ–ಭೈರವಿ (ಅಟತಾಳ).

ಶರಣು ಸಿತ್ಯಾನಂದ ಸದ್ಗುಣಸಾಂದ್ರ ನಿನ್ನ ಚರಣ ಕಮಲಂಗಳಿಗೆ ಶ್ರೀ ವರದೇಂದ್ರ ॥ ಪಲ್ಲ ॥ ನಿನ್ನನಂಬಿದ ದಾಸರನವನಿಯೊಳು–ಇಂಥ–ಬನ್ನ ಪಡಿಸುವದುಚಿತವೆ ದಯಾಳು ॥ ಅನ್ಯರುಂಟೇ ನೀವಲ್ಲದುದ್ಧರಿಸಲು ಪ್ರಪನ್ನ ಪೋಷಕ ಯನ್ನ ಬಿನ್ನಪ ಕೇಳು ॥ ಶರಣು ॥ ೧ ॥ ನರರ ಪಾಡಿಸದಿರೊ ಯತಿರಾಯಾ–ಹರಿ–ಸ್ಮರಣೆ ಮಾಡಲು ಮನ ಕೊಡು ಜೀಯ ॥ ಕರೆಕರೆ ಭಾವದೊಳಗೊಂದುಪಾಯು–ಕಾಣೆ–ಹರಿಸಿಕ್ಲೇಶವ ವೋದತೋರಿಸಯ್ಯ ॥೨॥ ಧರೆಗೆ ಪ್ರಸಿದ್ಧ ಪುಣ್ಯಾಲಯವಾಸ–ಕಾಯೊ–ನೆರೆನಂಬಿದವರನ್ನ ರವಿಭಾಸ ॥ ಹರಿದಾಸರ ಕಾಡುವರನ್ನಾ ಭಾಸಮಾಡೊ ಗುರುಪ್ರಾಣೇಶ ವಿಠಲನ್ನ ನಿಜದಾಸ ॥ ಜಯ ॥ ೩ ॥

೮. ರಾಗ–ಭೈರವಿ (ಅಟತಾಳ).

ಹಿಂದಿನ ಸುಕರ್ಮವೇಸು । ಬಂದೊದಗಿದವೋವರ । ದೇಂದ್ರರಾಯ ಬಂದ ನಮ್ಮ ಮಂದಿರಕಿಂದು ॥ ಪ ॥ ಮುತ್ತಿನ ಅಂದಣದೊಳು । ಸತ್ತಿಗಿ ನೆರಳಿಲಿ । ಪ್ರಶಸ್ತವಾಗಿ ವೇದಶಾಸ್ತ್ರವೊತ್ತಿವೋದುವ ॥ ಉತ್ತಮ ಬುಧರಕೂಡ ಭೃತ್ಯರಸಂಗಡ ಬಹು । ಹತ್ತೆಂಟು ಬಿರುದಾವಳಿಯುಕ್ತ ಬಂದರು ॥ ೧ ॥ ತಂಡತಂಡಕ್ಕೆ ಜನರು । ಹಿಂಡುಗೂಡಿ ಫಲಗಳ । ಕೊಂಡುಬಂದು ಮಾಡು ವರು–ದಂಡಪ್ರಣಾಮ ॥ ಪಂಡಿತಾಗ್ರಗಣ್ಯರು ಭೂ । ಮಂಡಲದೊಳಾಗ ಶ್ರೀಯಾ । ಖಂಡಲನಂತೆ ತೋರ್ವಾ ಕಮಂಡುಲಧರ ॥ ೨ ॥ ಶ್ರೀಕರಪ್ರಾಣೇಶ

ವಿಟ್ಠಲನೇಕಾಂತದಿ ಒಲಿಸುವಲ್ಲಿ ॥ ಈ ಕುಂಭಿಣಿಯೊಳಗೀತಗೆ ಕಾಣೆನೀಡ ॥ ನೀಕಾಯಬೇಕೆಂದವರ ಶೋಕವ ಪರಿಹರಿಸಿ ಜೋಕೆಮಾಡುವ ನಿತ್ಯ ದೇಶಿಕ ಕುಲಪತಿ ॥ ೩ ॥

೯. ರಾಗ-ಭೈರವಿ (ಆದಿತಾಳ).

ವಂದನೆಮಾಡಿರೈ, ಗುರು-ವರದೇಂದ್ರರ ಪಾಡಿರೈ ॥ ಬಂದ ದುರಿತಗಳ ಹಿಂದೆಮಾಡಿ ಸುಖ ತಂದುಕೊಡುವ ದಯಾಸಿಂಧು ಯತೀಂದ್ರರ ॥ ವಂದನೆ ಮಾಡಿರೈ ॥ ಪ ॥ ಮರುತಮತಾಂಬುಧಿ ಸೋಮನೆನಿಪ ವಸುಧೇಂದ್ರ-ಸದ್ಗುಣಸಾಂದ್ರ-ಗುರುಗಳ ಕರಕಮಲದಿ ಜನಿಸಿದ ಸುಕುಮಾರಾ-ಕುಜನ ಕುಠಾರಾ ॥ ನೆರೆನಂಬಿದ ಭಕುತರನನುದಿನದಲಿ ಪೊರೆವಾ-ದುರಿತವತರಿವಾ । ಧರೆಯೊಳು ತ್ಯಾಗದಿ, ಕರ್ಣನಮರೆಸಿದ ನೋಡಿ-ವರಗಳ ಬೇಡಿ ॥ ೧ ॥ ಕರಿಹಿಂಡೊಳು ಹರಿ ಹೊಕ್ಕತೆರದಿ ವಾದಿಗಳ-ಕೀಳು ಮತಗಳ । ವರಶಾಸ್ತ್ರಗಳಲಿ ಗೆಲಿದು ಸುಬುದ್ಧಿಯ ವರದ-ಜಗದೊಳು ಮೆರೆದ ॥ ಶರಭಂಗ ವರದ ಚರಣ ಸರಸೀರುಹ ಭೃಂಗ-ವಿಷಯ ಅಸಂಗ ॥ ಸ್ಮರಣೆಯ ಮಾಡೆ ಪಿಶಾಚ ರೋಗಗಳ ಭಯವೂ ಮುಟ್ಟದಲಿಹವೂ ॥ ೨ ॥ ಸಾನುರಾಗದಲಿ ಶ್ರೀರಾಘವೇಂದ್ರರ ಸ್ತೋತ್ರ-ಮಾಳ್ಪಸುಪಾತ್ರ । ಜಾನಕೀ ಪತಿಯಾನಂದದೊಳಿವರಿಗೆ ಒಲಿವ-ಹೃದಯದಿಸುಳಿವ॥ ದೀನದಯಾಳು ಅಪರಿಮಿತಮಹಿಮ ಗುಣಾಢ್ಯಾ । ವಾದದಿದಾಢ್ಯಾ ॥ ಧ್ಯಾನಿಸೆಮನದೊಳು ಜ್ಞಾನ ಕೀರ್ತಿ ಸುಖಕೊಡುವ-ಅಘಗಳಕಡಿವ ॥ ವಂದನೆ ॥ ೩ ॥ ವಿಷ್ಣುನಲೋಕ ಪ್ರವೇಶಮಾಡಿದ ಚರಿಯಾ-ಕೇಳಿರಿ ಪರಿಯಾ । ಶಿಷ್ಟಜನರು, ವಿಶ್ವಾವಸು ನಾಮಕ ಅಬ್ದ ಆಷಾಢಶುದ್ಧ ॥ ಷಷ್ಠಿಯುಕುಜವಾಸರ ಉತ್ತರಾ ನಕ್ಷತ್ರಾ, ವರಪುಣ್ಯಕ್ಷೇತ್ರ ॥ ನಟ್ಟನಡುವೆ ವೃಂದಾವನ ಮಧ್ಯದೊಳಿರುವ । ಸೌಖ್ಯವಸುರಿವಾ ॥ ೪ ॥ ಆನೆ ಹಂಡೆವಸನಗಳು-ದ್ರವ್ಯವುನಾನಾ ಮಾಡಿದ ದಾನ । ಅನಗರದಿ ಬಹು ಮಂದಿಯು ಭಕುತಿಯಲಿಂದಾ, ಪೂಜಿಪಚಂದ । ಸೂನುಪಡೆದು ಸುಖ ಪಡುವರು ಸರ್ವರು ನಿತ್ಯಾ ಈತನಸತ್ಯಾ ॥ ನಾನೆಂತುಸಿರಲಿ ಪ್ರಾಣೇಶವಿಠಲನ ದಾಸಾ, ಮುನಿ ಉತ್ತಂಸ ॥ ೫ ॥

೧೦. ರಾಗ–ಕಾಂಬೋಧಿ (ಆದಿತಾಳ).

ಗುರುವರದೇಂದ್ರ ದಯಾಂಬುಧೇ–ಶರಣಾಗತವತ್ಸಲ, ಈಶ ಚರಣ ಕಮಲಷಟ್ಪದ, ಪಾಲಿಸು ಕಾಷಾಯ ವಸನಭೂಷಾ ॥ ಪ ॥ ದುರ್ಮತ ಭುಜಗಕುಘರ್ಮವಿನಾಯಕ । ಕರ್ಮಬದ್ಧವ್ರತಾ ಶರ್ಮ ತ್ರಿಧರಪ್ರಿಯ, ಧರ್ಮಾಸಕ್ತನೆ ನಿರ್ಮಲ ಶುಭಚರಿತ ॥ ಭರ್ಮ ಸಮಾಂಗ ಅಧರ್ಮಶಿಕ್ಷ ಕರಿಚರ್ಮಾಂಬರ ಪ್ರೀತ । ಕಿರ್ಮೀರಾರಿ ಸುಶರ್ಮತೀರ್ಥಸಖ ಕರ್ಮಂದಿಪ ನಾಥ ॥ ೧ ॥ ಶ್ರೀಮನೋರಮ ಸುತ್ರಿಧಾಮದೇವ ಶ್ರೀರಾಮಪದಾಸಕ್ತಾ ॥ ಕಾಮಿತ ಫಲದ, ಧರಾಮರ ವಂದಿತಸ್ವಾಮಿ, ನಮಿಪಭಕ್ತ–ಶ್ರೀಮಂದಾರ, ಅನಾಮಯ, ಸದ್ಗುಣಧಾಮನೆ ಸುವಿರಕ್ತಾ । ಪಾಮರದೂರ ಲಲಾಮ ವದಾನ್ಯ, ಮಹಾಮಹಿಮನೆ ಶಕ್ತ ॥ ೨ ॥ ಮಾನಿಪೂಜ್ಯ ಸುಜ್ಞಾನಿ ಧೀರ ಸದ್ಭಾನುಚಂದ್ರಭಾಸ ॥ ದೀನಪೋಷಕ ನಿಜಾನುಗಪಾಲಕ, ಕ್ಷೋಣಿಪ ನಿರ್ದೋಷ ॥ ಸಾನುರಾಗದಲಿ ಪೋಣಿಸುಸನ್ಮತಿ ಮೌನಿಕುಲಾಧೀಶ । ನೀನಲ್ಲದೆ ಶ್ರೀ ಪ್ರಾಣೇಶ ವಿಠಲ ತಾನೊಲಿಯನು ಲೇಶ ॥ ಗುರು ॥ ೩ ॥

೧೧. ರಾಗ–ಮೋಹನಕಲ್ಯಾಣೀ (ಆದಿತಾಳ).

ಗುರುವೇ ಶ್ರೀವಸುಧೇಂದ್ರ ಕರಜಾತ ಸದ್ಗುಣಸಾಂದ್ರ ವರದೇಂದ್ರ ರಾಯ ಜಿತೇಂದ್ರ । ಮರುತಮತಾಬ್ಧಿಚಂದ್ರ ॥ ಶರಣು ನಿನ್ನಯಪದ ಸರಸಿಜಯುಗಗಳಿಗೆರವುಮಾಡದೆ ಕಾಯೊ, ಪರಮದಯಾಳು ॥ ಪ ॥ ದಾತಾ, ಧರಿತ್ರೀಸುತೀ ನಾಥಶ್ರೀರಘುಪತಿ–ದೂತ, ಭುವನದೋಳ್ ಖ್ಯಾತಿಯೋ ತವಸತ್ಕೀರುತಿ ॥ ಭೂತಭಯರೋಗವಾ ತರಿದಟ್ಟುವಾ । ನಾಥ ರಕ್ಷಕ ಜಲಜಾತಾಂಬಕನೇ ॥ ೧ ॥ ದೋಷರಹಿತಯನ್ನ ಕ್ಲೇಶಹಂಗಿಸೊ, ಸಂನ್ಯಾಸಶಿರೋಮಣಿಯೆ ಮುನ್ನಾ–ಆಶೆಬಿಡಿಸಿ, ನಿನ್ನ ॥ ದಾಸನೆನಿಸಿಕೊ ಉದಾಸೀಸದಲೆ ಬಹುಘಾಸಿಮಾಡದೆ ರವಿಭಾಸ ಗುಣಾಢ್ಯ ॥ ೨ ॥ ಏನಾದರೇನು, ಕೇಳು ಮಾನವರಾಶ್ರಯ–ಧರೆಯೊಳು । ನಾನಿಚ್ಛಿಸೆನೊ ಕೃಪಾಳು । ಮಾನ ನಿನ್ನದು ಕೇಳು ॥ ನೀನೆವೆಗತಿಯೆಂದು ಧ್ಯಾನಮಾಡುವರಿಗೆ । ಪ್ರಾಣೇಶವಿಠಲನ ಕಾಣಿಸಿಕೊಡುವಿ ॥ ೩ ॥

೧೨ ರಾಗ–ಸುರಟ (ಅಟತಾಳ).

ಪಾಲಿಸೋ ಪಾಲಿಸೋ ॥ ಕರುಣಾಲಯ ವರದೇಂದ್ರ–ಮುನಿ, ಸುಖ ಸಾಂದ್ರ ॥ ಪಾಲಿಸೊ ॥ ಪ ॥ ಪುಣ್ಯಮಂದಿರವಾಸ–ಸನ್ನುತಜನಪಾಲ ॥ ಬನ್ನ ಪಡಿಸದಲೆ ಯನ್ನನುದ್ಧರಿಸೋ ॥ ೧ ॥ ದೀನಸುರದ್ರುಮ । ಹೀನ ಪಂಕಜ ಸೋಮ । ಮಾನಿಸುಜ್ಞಾನಿನಿನ್ನೇನು ಬಣ್ಣಿಪೆನೋ ॥ ೨ ॥ ತ್ರುಟ ಮಾತ್ರಬಿಡ ದಲೆ, ಘಟನೆಯಮಾಡಿಸೊ ॥ ಸಟೆಯಲ್ಲ ಪ್ರಾಣೇಶ । ವಿಟ್ಠಲನ ಸ್ಮರಣೆ ॥ ೩ ॥

೧೩. ರಾಗ–ಪಂತವರಾಳಿ (ಅಟತಾಳ).

ತುತಿಸಲಳವೇ ಶ್ರೀವರದೇಂದ್ರನಾ ಅಮಿತ ಮಹಿಮ । ಕ್ಷಿತಿಸುರಗುರು ಸುಗುಣಸಾಂದ್ರನ–ಮುನಿಪನ ॥ ಪ ॥ ಭಾಗವತರ ಪ್ರಿಯನೆನಿಪನ–ಪ್ರಣತ ಜನರ । ರೋಗಕಳೆದು ಸುಖವಕೊಡುವನ । ಕುಮತಗಳನು–ಬೇಗಗೆಲಿದು ಸುಮತಿಕೊಡುವನ ॥ ದಯಾಸಮುದ್ರ ಯೋಗಿವರ್ಯ ರವಿಪ್ರಕಾಶನಾ, ಅನಘನ ॥ ೧ ॥ ರಾಘವೇಂದ್ರರನುಗ್ರಹಪಾತ್ರನ–ವೈಷಿಕದ ಕುಭೋಗ ತೊರೆದ ನಿಷ್ಪ್ರಪಂಚನ । ದುರ್ಮತಿಗಳ–ಯೋಗಕೂಲಿಯದಿಪ್ಪ ಧೀರನ । ಭವ ಭಯವನು ॥ ನೀಗಿ ಹರಿಯ ಸದನವತೋರ್ಪನಾ ವರದನ ॥ ೨ ॥ ಕಲಿಮ ಲಾಪಹಾರಶಕ್ತನ–ಪ್ರಾಣೇಶವಿಠಲ–ನೊಲಿಸಿಕೊಂಡಮಿತ ಸಮರ್ಥನ ॥ ಮಾರುತಿಮತಜಲಧಿವೆಚ್ಚಿಸುತಿಹ ಚಂದ್ರನ । ಬೃಹತ್ಸ್ನತಟನೀ ನಿಲಯ ಶ್ರೀವಸುಧೇಂದ್ರ ಪುತ್ರನ–ವಿರಕ್ತನ ॥ ೩ ॥

೧೪. ರಾಗ–ಪೂರ್ವಿ (ಆದಿತಾಳ).

ಗುರುರಾಯಾ ಗುರುರಾಯಾ । ತರಣಿಪ್ರಕಾಶ ಯತಿಪ ವರದೇಂದ್ರ ॥ ಪ ॥ ಬೆಂದೆನೋ ಭವದೊಳು । ತಂದೆನೀ ಬಹು, ತ್ವರೆಯಿಂದ ಕರಪಿಡಿಯೊ ಮಂದದಯಾಳೋ ॥ ೧ ॥ ಆರೆನು ಮನುಜರು ದೂರುವಮಾತನು । ಅರಿ ಗುಸಿರಲಿನಿವಾರಿಸೋಸ್ವಾಮಿ ॥ ೨ ॥ ನೀನೊಲಿಯಲು, ಭಯಕಾಣಿಸಿಕೊಂ ಬುದೆ ಹೀನ ಮತಟವಿಕೃಶಾನು ಮಹಾತ್ಮ ॥ ೩ ॥ ಮೇದಿನೀಪರು, ಬೆರ ಗಾದರು ದಾನಕೆ । ಮೋದಮುನಿಮತಮಹೋದಧಿಚಂದ್ರ ॥ ೪ ॥ ಕಾಷಾ ಯವಸನಿ ದೇಶಿಕವರಪ್ರಾ । ಣೇಶ ವಿಠಲನವರ ಸಲಹುವದೋ ॥ ೫ ॥

೧೫. ರಾಗ–ಭೈರವಿ (ಝಂಪೆತಾಳ).

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥ ಪುಣ್ಯಾಲಯನಿಲಯಗೆ. ವಸುಧೇಂದ್ರ ಕುವರಗೆ । ಸನ್ನುತಜನಸುರತರು ರವಿತೇಜಗೆ ॥ ಪನ್ನಗ ಶಯನನ್ನ ಪದವನಜ ಭೃಂಗಗೆ, ಅನ್ಯಮತ ಜೀಮೂತಪವಮಾನಗೆ ॥ ಜಯಮಂಗಳಂ ॥ ೧ ॥ ಗುರುಮಧ್ವಮುನಿಮತ ಜಲಧಿ ಪೂರ್ಣಚಂದ್ರಮಗೆ. ಧರಣಿಸುರವಂದ್ಯನಿಗೆ ಸ್ವರ್ಣಾಭಗೆ । ದುರ್ಮತಿಯುಕಳೆದು ಸುಜ್ಞಾನ ಪ್ರೇರಿಸುವರಿಗೆ । ಹರಿಯೇ ಪರನೆಂದು ಮೆರಸಿದ ಮುನಿಪಗೆ ॥ ೨ ॥ ಪ್ರಾಣೇಶ ವಿಠಲನ್ನ ತನ್ನನೆನೆವರ ಮನದಿ । ಕಾಣಿಸಿಕೊಡುವ ಕೃಪಾಸಾಗರನಿಗೆ । ಮಾನಾಂಕಜಿತಗೆ, ಅಗಣಿತ ಚರಿತೆ ತೋರ್ದವಂಗೆ । ಕ್ಷೋಣಿಯೊಳಗಪ್ರತಿವದಾನ್ಯಾರ್ಯಗೆ ॥ ಜಯಮಂಗಳಂ ॥ ೩ ॥

೧೬. ರಾಗ–ಭೈರವಿ (ಝಂಪೆತಾಳ).

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥ ಭುವನೇಂದ್ರ ಗುರುಕರಕಮಲದಿಂದ ಪೂಜಿತಗೆ । ಅವನಿಯೊಳ್ಪೆಸರಾದ ವರದೇಂದ್ರಗೆ । ಹವರನ ಮತಿಯುಕೊಟ್ಟು ಅಜ್ಞಾನಕಳವರಿಗೆ । ಶಿವನೇ ಪರನೆಂಬುವರ ಶಿಕ್ಷಿಪರಿಗೆ ॥ ಜಯ ॥ ೧ ॥ ವಸುಧೇಂದ್ರತೀರ್ಥರಾಯರ ಪುತ್ರರೆನಿಪರಿಗೆ ಬಿಸಜನಾಭನ ಚರಣ ಕಂಜಾಳಿಗೆ । ಝಷಕೇತುವಿನ ಮೇಳ ತುಚ್ಛಮಾಡಿದವರಿಗೆ । ಅಸದೃಶ ಮಹಿಮ ಪಿಂಗಳತೇಜಗೆ ॥ ಜಯಮಂಗಳಂ ॥ ೨ ॥ ಕಿವುದ ಅಂಧಕಕುಂಟರಿಗೆ, ವರಗಳ ಕೊಡುವವಗೆ । ಭವಸಮುದ್ರವ ದಾಂಟಿಸುವ ಶಕ್ತಗೆ । ದಿವಿಜೇಶ ಪ್ರಾಣೇಶವಿಠಲನ್ನ ದಾಸನಿಗೆ । ಜವನಬಾಧೆಯ ಬಿಡಿಸಿ ಸಲಹುವವಗೇ ॥ ಜಯಮಂಗಳಂ ॥ ೩ ॥

## (೬) ಶ್ರೀ ರಾಘವೇಂದ್ರರಾಯರ ಸ್ತುತಿ.

೧೭. ರಾಗ–ವರಾಳಿ (ಅಟತಾಳ).

ರಾಘವೇಂದ್ರ ನಿನ್ನ ಪಾದಸರಸಿಜಕೆ ಬಾಗುವೆ ಮನ್ಮನದರಿಕೆ ಪೂರೈಸೊ ॥ ರಾಘವೇಂದ್ರ ॥ ಪ ॥ ವಾಸುದೇವಾರ್ಚಕ ಭೂಸುರವಂದಿತ । ದೋ

ಷವ ಕಳೆವದು ದೇಶಿಕವರ್ಯ ॥ ೧ ॥ ವಿಷಯಂಗಳೆಲ್ಲ, ದ–ಹಿಸಿ ಯೋಗ ಮಾರ್ಗದಿಂ ॥ ವಸುದೇವಪುತ್ರನೊಲಿಸಿಕೊಂಡ ಶಕ್ತ ॥ ೨ ॥ ಭೂತಪ್ರೇತಗಳ ಬಲಾತುರದಲಿ ಕಳೆವಾ ತುಂಗನುಹಿಮನೆ ಭೂತಲದೊಳಗೆ ॥ ೩ ॥ ಅಂಗಜ ಶರದೂರ ಮಂಗಳವಿಗ್ರಹ । ತುಂಗತೀರಾವಾಸ । ಪಿಂಗಳತೇಜ ॥ ೪ ॥ ದಂಡ ಕಾಷಾಯ ಕಮಂಡಲಧರ, ಪ್ರಚಂಡಮಹಾತ್ಮ ಸುಪಂಡಿತರೊಡೆಯ ॥ ೫ ॥ ಸಾರುವಶರಣರ, ಘೋರಿಸುತಿಪ್ಪ–ಸಂಸಾರಕಡಲಿಗೆ ಕರೀರ–ಸಂಭವನೇ ॥ ೬ ॥ ಮರೆಹೊಕ್ಕದಾಸರ ಮರಿಯಾದೆಸಲಹಯ್ಯ । ಪರಮತವುರಗಕ್ಕೆ ಗರುಡನೆನಿಪನೆ ॥ ೭ ॥ ತಂದೆಪಾಲಿಸೊ ದಯಾಸಿಂಧು ಜಗದ್ಗುರು । ಮಂದ ಮತಿಗಳೆಂಬ ಇಂಧನಕ್ಕನಲ ॥ ೮ ॥ ವಟುವಪು ಪ್ರಾಣೇಶ ವಿಠಲನ ನಿಜದಾಸ । ಸಟೆಯಲ್ಲ ಸಂಸಾರ ಕಟಕಟ ಬಿಡಿಸೋ ॥ ೯ ॥

### ೧೮. ರಾಗ–ಕಾಂಬೋಧಿ (ಅಟ್ಟತಾಳ).

ಸುವ್ವಿ ಸುವ್ವಾಲೆ ॥ ಸುವ್ವೀಸಾಧ್ವಿಯರು, ರಾಘವೇಂದ್ರರ ಪಾಡಿ ॥ ಸುವ್ವಿಸುವ್ವಾಲೆ ॥ ಪ ॥ ಅಂದಿನಕಾಲದ ಮಧ್ವಶಾಸ್ತ್ರವ ಮನಕೆ ತಂದು । ಅಂದದಿ ಟಪ್ಪಣಿ ಮಾಡಿದ ದೇವರಾರು । ಸುವ್ವೀಸುವ್ವಾಲೆ ॥ ಅಂದು ವಾದಿ ಸುವ ಜನರನ್ನು ಬಾಯಿಮುಚ್ಚಿಸಿದ ಚಂದಿರವದನೆ ಈತನಮ್ಮ ಗುರುವು ॥ ಸುವ್ವೀಸುವ್ವಾಲೆ ॥ ೧ ॥ ಇವರ ಚರಿತೆಯನ್ನು । ತೋರಿದಷ್ಟು ತುತಿಸುವೆ । ಕಿವಿಗೊಟ್ಟು ಕೇಳುವದು ಬುಧಜನರು ॥ ಸುವ್ವಿ ॥ ಪವನಾಂಶರಿವರು ಕವಲಿಲ್ಲ ಖ್ಯಾತರಾಗಿ । ಅವನಿಯ ಸುರರಿಂದರ್ಚನೆಗೊಂಬುವರು ಸುವ್ವಿ ॥ ೨ ॥ ಅಷ್ಟಾಕ್ಷರಮಂತ್ರವನ್ನು ತಪ್ಪದಲೆ ನಿತ್ಯವಾಗಿ । ನಿಷ್ಠೆಯಿಂದ ಜಪಿಸಲು ಭೂತ ಭಯವು ॥ ಸುವ್ವಿ ॥ ಕುಷ್ಠರೋಗ ಕ್ಷಯ ಪಾಂಡುಜ್ವರ ಸನ್ನಿ ಮೊದಲಾದ ಅಷ್ಟುಪದ್ರವಾಕ್ಷಣ ಬಿಟ್ಟುಪೋಡುವವು ॥ ಸುವ್ವಿ ॥ ೩ ॥ ಮೃತ್ತಿಕನಾಲೆ ಅಂಗಾರ ದಿವ್ಯಮಂತ್ರಾಕ್ಷತೆಯು ॥ ಹತ್ತಿಲಿರಾಲು ಕ್ಲೇಶವ ಲೇಶಾ ಕಾಣರು ॥ ಸುವ್ವಿ ॥ ಎತ್ತಹೋದರು ಜನರಿಗೆ ಜಯಪ್ರದ ತೋರುವದು ತತ್ತಲಿಲ್ಲ, ಶತಸ್ಸಿದ್ಧ ಮತ್ತೇನುಕೇಳಿ ॥ ಸುವ್ವಿ ॥ ೪ ॥ ಪಂಡಿತರು ಮೊದ ಲಾಗಿ ಹಸ್ತಿ ಉಷ್ಟ್ರ ಕುದುರೆಯ ಹಿಂಡುಗಳು ತೃಷೆಯಿಂದ ಬಳಲುತಿರೆ

॥ ಸುಪ್ರಿ ॥ ದಂಡಜಗತಿಗೂರಿತೋಯು ತೆಗಿಸಿಯುವನೀ । ಮಂಡಲದೊಳಗೆ ಪೆಸರಾದರಿವರು ॥ ಸುಪ್ರಿ ॥ ೫ ॥ ಕಟ್ಟಲಿಯ ಭತ್ತದೊಳು ಭೂಪದಳಯುಕ್ತ ಬರಲಿಟ್ಟುಕೊಂಡು ಉಣಿಸಿ ಉತ್ತಮ ವರವ ॥ ಸುಪ್ರಿ ॥ ಕೊಟ್ಟುಕಳಿಸಿದ ಮೇಲೆ । ಆವು ಕೊಂಚಿಯಾಗಲಿಲ್ಲ । ಗಟ್ಟಿಸಂಕಲ್ಪರಿವರು । ಮುನಿಪರು ॥ ೬ ॥ ವಿಪ್ರರೆಲ್ಲರು ಹೇಳಿಸಿ ಕಟ್ಟಿಸಿದ ಸದನವ । ಥಟ್ಟನೆ ಕೆಡಿಸಿ ಭೂಪಮೆಚ್ಚು ವಂದದಿ ॥ ನೆಪ್ಪು ಧರೆಗಾಗಲೆಂದು ಗುರುಸುಧೀಂದ್ರ ಕುಮಾರ । ಸರ್ಪನ ತೋರಿಸಿ ಸುಪ್ರಖ್ಯಾತರಾದರು ॥ ಸುಪ್ರಿ ॥ ೭ ॥ ದ್ವಿಜರ ಸ್ತೋಮವು ಬಾಯಿ ಬಿಡುತಿರೆ ದಯದಿಂದ ॥ ನಿಜಕಾಷ್ಟವಿಳೆಗೆ ನಿಲ್ಲಿಸಿ ಮರವ ॥ ಸುಪ್ರಿ ॥ ಸೃಜಿಸಿ ಪಲ್ಲವ ಫಲಯುಕ್ತವಾಗಿ ತೋರಿಸಿದ ॥ ಭಜಿಸಿರಿವರನ್ನು ಮಕ್ಕಳುಬೇಡುವರು ॥ ಸುಪ್ರಿ ॥ ೮ ॥ ಮುತ್ತಿನಮಾಲಿಕೆ ನೃಪಭಕ್ತಿಯಿಂದ ಕೊಡಲಾಗಿ । ಸಪ್ತ ಜಿಹ್ವೆಗುಣಿಸಿದ ಸರ್ವರುನೋಡ ॥ ಸುಪ್ರಿ ॥ ಮತ್ತುಬೇಡಲು ಪಾವಕನಿಗೆ ಪ್ರಾರ್ಥನೆಯುಮಾಡಿ । ಮರ್ತ್ಯಪಗೆ ಇತ್ತರು ಮೊದಲಂತೆಯೆ ತಂದು ॥ ಸುಪ್ರಿ ॥ ೯ ॥ ಹಿಂದೆಮಾಡಿದ ದುಷ್ಕರ್ಮ ತೀರ ಬಂದದನು ನೋಡಿ । ಬಂದಾಕ್ಷಣದಲ್ಲಿ ಆವನ ವಿಚಾರಿಸಿ ॥ ಸುಪ್ರಿ ॥ ಇಂದಿರೇಶನ ಕಾರುಣ್ಯಬಲದಿಂದ ಜನನೋಡ ಸಂದೇಹವಿಲ್ಲದೆ ಸುಲೋಕವನಿತ್ತರು ॥ ಸುಪ್ರಿ ॥ ೧೦ ॥ ತುಂಗಾತೀರಮಂತ್ರಾಲಯದಲ್ಲಿ ಶ್ರಾವಣ ಬಹುಳ ಮಂಗಳ ಬಿದಿಗೆಯಲ್ಲಿ ನಿವಾಸರಾದರು ॥ ಸುಪ್ರಿ ॥ ಶೃಂಗರ ವೃಂದಾವನ, ದ್ವಾದಶನಾಮಶ್ರೀಮುದ್ರೆಯು ಕಂಗಳುಸಾಲವುನೋಡ ಹೊದ್ದ ಶಾಠಿಯ ॥ ಸುಪ್ರಿ ॥ ೧೧ ॥ ಅಂಧಕ ಬಧಿರ ಕುಂಟ ನಾನಾರೋಗಿಗಳು ಮತ್ತೆ, ಕಂಧನರ್ಜ ಮೊದಲಾದವರಿಗೆ ಕಾಮ್ಯ ॥ ಸುಪ್ರಿ ॥ ತಂದುಕೊಡುವರು ಬೇಗ ಇತರ ಸಂಶಯವಿಲ್ಲ । ಮಂದಭಾಗ್ಯರಿಗೆ ಇವರ ಸೇವೆದೊರೆಯದೊ ॥ ಸುಪ್ರಿ ॥ ೧೨ ॥ ಕೌತುಕವೇನೆನ್ನಲಿ ಮುಂಜಿ ವಿವಾಹ ಮಾಡಿಸುವರು । ಚಾತುರ್ಮಾಸದೊಳಗೆಗೃಹಗಳಸ್ತವಾಗೆ ॥ ಸುಪ್ರಿ ॥ ಧಾತಾ, ಪಿತನಿಲಯ ವಿದೇನೋಯೆಂದು ತೋರುವದು ಪ್ರೀತಿಯುಳ್ಳಭಕ್ತರಿಗೆ, ಅಧಮರಿಗಲ್ಲ, ॥ ಸುಪ್ರಿ ॥ ೧೩ ॥ ಪಾಡ್ಯ, ಪೂರ್ವಾರಾಧನೆ ಆರಾಧನೆ ಉತ್ತರಾರಾಧನೆಗೆ, ಒಡ್ಡಿ ಬರುವದು ಎಂಟು ದಿಕ್ಕುಗಳಿಂದ ಜನವು ॥ ಸುಪ್ರಿ ॥ ಕಡ್ಡಿ ಹಿಡಿಯದಂಥ ಸಂದಣಿಯೊಳು ಸನ್ಮುಹೂರ್ತದಿ । ದೊಡ್ಡ ರಥವೇರಿ ಮಠವ ಸುತ್ತು

ವರು ॥ ಸುವ್ವಿ ॥ ೧೪ ॥ ಇಷ್ಟೇಯೆನ್ನಲು ವಶವಲ್ಲ ಮಹಿಮೆಗಳಿನ್ನೂವುಂಟು । ನಷ್ಟಮಾಡುವರು ದುರ್ಮತದಾರಿದ್ರ್ಯವ॥ ಸುವ್ವಿ॥ ಸೃಷ್ಟಿಗೊಡೆಯ ಪ್ರಾಣೇಶ ವಿಟ್ಠಲನೆಂದುಪೇಳ್ದರೂ ಎಷ್ಟು ವೇಳಿದರೂ ಯನ್ನಿಂದಲಿ ತೀರದು ॥ ಸುವ್ವಿ ಸುವ್ವಾಲೆ ॥ ೧೫ ॥

೧೯. ರಾಗ–ಭೈರವಿ (ಝಂಪೆತಾಳ).

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥ ಯೋಗೇಂದ್ರತೀರ್ಥ ಕರ ರಾಜೀವ ಪೂಜಿತಗೆ । ಭಾಗವತ ಜನ ಪ್ರೀಯರೆನಿಸುವರಿಗೆ ॥ ಯೋಗಿ ಗಳಿಗಧಿಪತಿಸುಧೀಂದ್ರಕರಜಾತರಿಗೆ । ಬಾಗಿವಂದಿಪರ ಸಲಹುವ ಸ್ವಾಮಿಗೆ, ॥ ಜಯಮಂಗಳಂ ॥ ೧ ॥ ವರಹಜಾತೀರ ಮಂತ್ರಾಲಯನಿಕೇತನಗೆ । ಧರಣಿ ಯೊಳಗಪ್ರತಿಮ ಚರಿತರ್ತೋರ್ವವಗೆ । ಕುರುಡುಕಿವುಡಾದಿಗಳ ಬಯಕೆ ಪೂರೈಪರಿಗೆ ॥ ವರಸುವೃಂದಾವನದಿ ಶೋಭಿಪರಿಗೆ ॥ ೨ ॥ ಆರಾಧನೆಯ ಜನರು ಮಾಡುವದು ನೋಡಲ್ಕೆ ವಾರವಾರಕ್ಕಧಿಕವೆನಿಸುವರಿಗೆ ॥ ಮಾರ ಮಣ ಪ್ರಾಣೇಶವಿಠಲನಂಘ್ರಿಜಲಜಕೆ, ಆರುಪದವೆನಿಪಗೆ ಕರುಣಾಜಲಧಿಗೆ ಜಯ ॥ ೩ ॥

೨೦. ರಾಗ–ಭೈರವಿ (ಝಂಪೆತಾಳ).

ಶ್ರೀರಾಮ ಚಂದ್ರಾಂಘ್ರಿ ಸರಸೀರುಹ ಭೃಂಗನಿಗೆ । ಧೀರಸುಧೀಂದ್ರ ಕರಸಂಭೂತಗೆ ॥ ವಾರಾಹಿತೀರ ಮಂತ್ರಾಲಯನಿಕೇತನಿಗೆ । ಶ್ರೀರಾಘ ವೇಂದ್ರರಾಯರ ಚರಣಕೆ ॥ ೧ ॥ ವರಮ ತಧ್ವಾಂತಭಾಸ್ಕರಗೆ ಸ್ವರ್ಣಾಭಗೆ । ಶರಣರಭಿಲಾಷೆ ಪೂರೈಸುವರಿಗೆ ॥ ದರುಶನಾದಿ ತ್ರಿಭಾಷದರ್ಥ ಬಲ್ಲವರಿಗೆ । ಮರುತ ಮತಕಡಲಿಗುಡುಪತಿಯೆನಿಪಗೆ ॥ ೨ ॥ ಪ್ರಾಣೇಶವಿಟ್ಠಲನವರೊಳು ಪ್ರೀತಿಯುಳ್ಳವಗೆ । ಕ್ಷೋಣಿಯೊಳು ಸರಿಯಿಲ್ಲದ ಮಹಿಮನಿಗೆ ॥ ಧ್ಯಾನಕ್ಕೆ ಬಂದೊದಗುತಿಪ್ಪ ಗುರುರಾಯರಿಗೆ । ಮಾನಾಂಕಜಿತಗೆ ದೇಶಿಕವರ್ಯಗೆ ॥ ೩ ॥ (ಜಯಮಂಗಳಂ ನಿತ್ಯ ಶುಭಮಂಗಳಂ).

## (೭) ಸುಬೋಧೇಂದ್ರರ ಸ್ತುತಿ.

೨೧. ರಾಗ–ಪೂರ್ವಿ (ಏಕತಾಳ).

ಅಭಯವೀಗಲೆ ಬೇಡೆ ಗುರು ಸುಬೋಧೇಂದ್ರಾರ್ಯರ ನೋಡೆ ॥ ಸಖಿ ॥ ಪ ॥ ಪಾಪ ಕಳೆವಳಾಕಾಶ ಗಂಗೆ । ಬಹು–ತಾಪ ಕಳೆವ ದ್ವಿಜನಾಥ । ಆಪಾದಪ ದೈನ್ಯ ಹರೀಸುಗುಣವು । ಈ ಪುರುಷರಿಗೊಪ್ಪುವದಲ್ಲೇ ಸಖಿ ॥ ೧ ॥ ಮೀನ ಕೂರ್ಮದ್ವಿಜ ನೋಡಿ ಸ್ಮರಿಸಿ ಮುಟ್ಟ । ಸೂನುಗಳನು ಸಲಹುವ ತೆರದಿ ॥ ಸುನೋಟದಿ ನೆನದು ಪಾದಸ್ಪರ್ಶವಿ । ತ್ತಾನತರನು ಪೊರೆವರು ಬಿಡದೆ । ಸಖಿ ॥ ೨ ॥ ಈ ಸಂಯಮಿಗಳ ಕೃಪೆಯೊಂದಿರುತಿರೆ । ಏಸು ಸಾಧನ ಇನ್ನೇತಕೆಲೆ ॥ ನಾಶ ರಹಿತ ವೈಕುಂಠವೇಸರಿ ಪ್ರಾಣೇಶ ವಿಠಲಸಿವರಲ್ಲಿಹದಕೆ ॥ ೩ ॥

೨೨. ರಾಗ–ಕಾಂಬೋಧಿ (ಏಕತಾಳ).

ಪಾಹಿಪಾಹಿ, ಜಿತಮಾರ । ಪಾಹಿಸುಬೋಧೇಂದ್ರ ಸಮೀರ ॥ ಮಹಾಮತಾಬ್ಧೀಂದು, ದೀನಾಮರ ಮಹೀಜ, ಸುಹಿತ, ಮುಹಿತ ॥ ಪಾಹಿಮಾಂ ಪಾಹಿ ॥ ಪಲ್ಲ ॥ ನಿರ್ಮಲಾತ್ಮ ಸದ್ಗುರುಧೀರ ಕರ್ಮವಿಷಯಾಪೇಕ್ಷಾದೂರ । ಧರ್ಮಾಸಕ್ತ ಲೋಕೋದ್ಧಾರ । ಶರ್ಮಸುಶರ್ಮಾದಭರ್ಮಾಂಗ ಮರ್ಮಜ್ಞ । ಪಾಹಿ ॥ ೧ ॥ ಅರ್ಕಮಹಿಮನೆ ಧೀಮಂತ, ಅರ್ಕಜನೊಲಿದಾನೀಶಾಂತ ॥ ಮರ್ಕಟದುರ್ವಾದಿಧ್ವಾಂತ–ಅರ್ಕ, ಕುತರ್ಕಸಂಪರ್ಕಾಹ, ಅರ್ಕಾಭ ಪಾಹಿ ॥ ೨ ॥ ತೀರ್ಥಪಾಲಾ ಭಕ್ತಾಧೀನ ತೀರ್ಥಾಂಘ್ರಿ ಪ್ರಾಣೇಶ ವಿಠಲನ ॥ ತೀರ್ಥದೂತ ನೀನಿದ್ದ ಸ್ಥಾನ–ತೀರ್ಥವು ತೀರ್ಥವ, ತೀರ್ಥವ–ತೀರ್ಥಮಾಂ ಪಾಹಿ ॥ ೩ ॥

## (೮) ವ್ಯಾಸರಾಯರ ಸ್ತುತಿ.

೨೩. ರಾಗ–ಕಲ್ಯಾಣಿ (ತ್ರಿಪುಡೆತಾಳ).

ವ್ಯಾಸರಾಯರ ಬೇಸರದೇನೆನದಾನೆ ಪೂರ್ತಿಸಿಕೊಂಬೆನಾಂ ॥ ಪ ॥ ದಾಸರಾಯರಿಗಾಸು ಮಂತ್ರೋಪದೇಶ ಕರುಣದಿಮಾಡಿದ । ದೇಶದೊಳಗೆ ವಿಶೇಷ ಮೆರೆದು ಅಶೇಷಜನರುದ್ಧರಿಸಿದ ॥ ೧ ॥ ವಾಸುದೇವನ ದ್ವೇಷಿಗಳ

ಅನಾಯಾಸದಿಂ ನೀ ಕರಿಸಿದ ॥ ದಾಸವರ್ಗವ ಪೋಷಿಸಲುನಿ–ರ್ದೋಷ ಗ್ರಂಥವಿರಚಿಸಿದ ॥ ೨ ॥ ಭಾಸುರಚರಿತ ಭೇಶಭಾಸ ಸುಕಾಷಾಯಾಂಬರ ಧರಿಸಿದ ॥ ವೀಶವಾಹನ ಕ್ಲೇಶಹ ಪ್ರಾಣೇಶ ವಿಟ್ಠಲನೊಲಿಸಿದ ॥ ೩ ॥

---

## (೯) ಯತಿವೃಂದಸ್ಮರಣೆ.

೨೪. ರಾಗ–ಕಾಂಬೋಧಿ (ಝಂಪೆತಾಳ).

ವಂದಿಸುವೆ ಗುರುಸಂತತಿಗೆ ಪ್ರತಿದಿನಾ–ನಂದತೀರ್ಥರ 'ಮತೋದ್ಧಾರರಿವರಹುದೆಂದು' (ಮತಾಂಬುಧಿಗೆವಿಧುಯೆಂದು) ॥ ಪ ॥ ಶ್ರೀಮದಕ್ಷೋಭ್ಯ ಮುನಿತ್ರೈಲೋಕ್ಯ ಭೂಷಣರ । ಧೀಮಂತಲೋಕವಂದಿತತೀರ್ಥರ ॥ ರಾಮ ಪದಜಲಜಾಳಿ ಸುಲಭ ರಘುಪುಂಗವರ। ಶ್ರೀಮಂತ ರಘುನಾಥ ರಘುವರ್ಯ ರಘುಸುತಗೆ ॥ ೧ ॥ ವಿದ್ಯಾನಿಧಿ ಮುನಿರಘುಪತಿಯ ನಾರಾಯಣರ ॥ ಮಧ್ವ ಭಕ್ತಾಗ್ರಣಿ ಮುಕುಂದ ತೀರ್ಥರ । ಅದ್ವೈತ ಗಿರಿ ಕುಲಿಶ, ರಾಮ ರಘುಪತಿತೀರ್ಥ, ಸದ್ವೈಷ್ಣವರಪಾಲ ರಾಮಚಂದ್ರಾರ್ಯರಿಗೆ ॥ ೨॥ ಶ್ರೀರಘೂತ್ತಮತೀರ್ಥ ರಘುರಾಜ ರಘುಪತಿಯ ಶ್ರೀರಾಮಚಂದ್ರತೀರ್ಥಾರ್ಯರ ಪದ । ವಾರಿಜಯುಗಳವ ಭಕ್ತಿಪೂರ್ವಕದಿ ಸ್ಮರಿಸುವೆನು ಮಾರರಮಣ ಪ್ರಾಣೇಶ ವಿಠಲ ಕರುಣಿಸಲೆಂದು ॥ ೩ ॥

---

## (೧೦) ಅಕ್ಷೋಭ್ಯತೀರ್ಥರ ಸ್ತುತಿ.

೨೫. ರಾಗ–ಶಂಕರಾಭರಣ (ಅಟ್ಟತಾಳ).

ರಕ್ಷಿಸೆನ್ನನು—ದಯಾಂಬುಧೇ–ರಕ್ಷಿಸೆನ್ನನು ॥ ಪ ॥ ರಕ್ಷಿಸೆನ್ನನು ಪಾಪ ಶಿಕ್ಷಿಸಿಕರುಣದಿ । ಪಕ್ಷಿವಾಹನಪ್ರಿಯ ಅಕ್ಷೋಭ್ಯಮುನಿಪ ॥ ಅನು ॥ ಅನುಮಾನವಿಲ್ಲದೆ ಮಣಿದೆತವಾಂಘ್ರಿಗೆ । ಅನಘ ಶ್ರೀಮಾಧವ, ಮುನಿಕರ ಜಾತ ॥ ೧ ॥ ಜಯಮುನಿವಂದಿತ ಜಯವಂತನೀನವೆ । ದಯಮಾಡದಿರೆ ದುಃಖ ಬಯಲಾಗಲರಿಯೆ ॥ ೨ ॥ ಪ್ರಾಣೇಶವಿಠಲನ ಧ್ಯಾನದೊಳಗೆ ಮನ ತಾನಿರುವಂದದಿ ಪೋಣಿಸು ಜವದಿ ॥ ೩ ॥

## (೧೧) ಮಾಧವತೀರ್ಥರ ಸ್ತುತಿ.

೨೬. ರಾಗ—ಸೌರಾಷ್ಟ್ರ (ಏಕ).

ನೋಡಿದೆ । ನಾ ಧನ್ಯನಿಂದಿಗೆ ನೋಡಿದೆ ಗುರುಮಾಧವತೀರ್ಥರ ವೃಂದಾವನವನ್ನು ॥ ಪ ॥ ಗಂಗೆಗೇನು ಪ್ರಯೋಜನವಿಳೆಯೊಳು ಬಾಹದಕೆ ॥ ಪಿಂಗಳಗೇನು ಜ್ಞಾನಿಗಳಿಗೇನು ॥ ತುಂಗಮಹಿಮೆಯಿಂದೆ ಅಜ್ಞಜನರ ಪಾಪ । ಹಿಂಗಿಸಬೇಕೆಂಬದಲ್ಲದೆ, ಮನವೆ ॥೧॥ ನರಹರಿಗುರುಸುತವರದ ಅಕ್ಷೋಭ್ಯ ಮುನಿಕರಪೂಜಿತಾರವಿಂದನಾಭರಲ್ಲಿ॥ ಧರಾಧರಜತೀರದಿ ಸತ್ಯಮುನಿಗಳಿಂದ। ನಿರುತಾರಾಧನೆಕೊಳುತಿರ್ಪರು ॥ ಮನವೆ ॥ ನಾ ಧನ್ಯ ॥ ೨ ॥ ಏನುಯಿವರ, ಬಂಣಿಸಲಿ ಎನ್ನಿಂದೊಶವಲ್ಲ । ಆನತಜನರಿಗೆ ಕರುಣಿಸಿ । ಪ್ರಾಣೇಶವಿಠಲನ ಧಾಮ ತೋರಿಸುವರು । ಕ್ಷೋಣಿಯೊಳಗಪ್ರತಿಮ ಮಹಿಮರು ॥ ೩ ॥

---

## (೧೨) ಪದ್ಮನಾಭತೀರ್ಥರ ಸ್ತುತಿ.

೨೭. ರಾಗ—ವರಾಳಿ (ಅಟ್ಟತಾಳ).

ಒದಗಿಪಾಲಿಸೊ ಭವಾಂಬುಧಿಯ ದಾಟಸೊ ॥ ಪ ॥ ಮದನಜಿತಭೂಸುರ ಶರಣ್ಯ । ಪದುಮನಾಭ ಯತಿವರೇಣ್ಯ ॥ ಅನುಪಲ್ಲ ॥ ಸಧ್ಯದೊಡ್ಡ ಮಾತು ಅಪ್ರಬುದ್ಧನಾನುಡಿಯೆ ಕೇಳು । ಮಧ್ವದ್ವೇಷಿಗಳಲಿ ಯನ್ನ ವಿದ್ಯೆ ತೋರಿ ಬದುಕದಂತೆ ॥ ೧ ॥ ಒಡಲಿನಾಸೆಗಾಗಿ ಕಂಡಕಡೆಗೆ ತಿರುಗಿ ಪ್ರಾಪ್ತಿಯೆಂಬು । ದುಡುಗಿ ಪೋಗಿ ಕೊನೆಗೆ ಮನೆಗೆ । ಮಿಡುಕಿ ಕೊಳುತ ಬರುವ ಧಮನ ॥ ೨ ॥ ಹಾನಿಲಾಭಕ್ಲೇಶವೋದ । ವೇನು ಆವಕ್ಷಣಕೊದಗಲು ॥ ಪ್ರಾಣೇಶವಿಠಲಕರುಣೆಯಿಂದ । ತಾನೆಕೊಟ್ಟನೆಂಬ ಸುಮತಿ ॥ ಒದಗಿಪಾಲಿಸೋ ॥ ೩ ॥

---

## (೧೩) ಶ್ರೀಮಧ್ವರಾಯರ ಸುವ್ವಾಲೆ.

೨೮. ಸುವ್ವೀಪದ.

ಸುವ್ವಾಲೆ ಸುವ್ವಿ ಸುವ್ವಾಲೆ ॥ ಪ ॥ ಗುರುಮಧ್ವರಾಯರ ಭಾಗ್ಯ । ಹರಮುಖ್ಯ ನಿರ್ಜರರಿಂದ, ವರ್ಣಿಸಲಸದಳವಮ್ಮ ॥ ಅನು ಪಲ್ಲವಿ ॥ ಇಂದಿರೆ

ಮೂರುರೂಪದಿಂದ ತಾನೆ ಪಡೆದಳು । ಎಂದು ಪೇಳುವದಾ ವೇದ । ಸುವ್ವಿ । ಮಂದಮತಿಗಳಿವರ ಮುಂದಿಯುಂತೆ ತಿಳಿದು ಅಂಧಃ ಕೂಪದೊಳು ಬೀಳುವರೆ ॥ ಸುವ್ವಿಸುವ್ವಾಲೆ ॥ ೧ ॥ ನೂರಾತೊಂಭತ್ತೆಂಟುಕಲ್ಪ ಘೋರ ತಾಪಸು ಮಾಡಿ ಮೂರುರೂಪವೀಗಾದನೆ ॥ ಸುವ್ವಿ ॥ ಮಾರೆ ಈಕಲ್ಪವನು, ವಾರಿಜಾಸನನಾಗಿ । ಈರೇಳು ಲೋಕವಾಳುವನೆ ॥ ಸುವ್ವಿ ॥ ೨ ॥ ಎಪ್ಪತ್ತೊಂದು ಮಹಾಯುಗಇಪ್ಪಒಬ್ಬೊಬ್ಬ ಮನು । ಅಪ್ಪಪ್ಪ ಬಹಳಾಯುಷೆಂಬೊರೊ ॥ ಸುಪ್ರಸಿದ್ಧವಾದ ದ್ವಿಸಪ್ತಮನುವು ಶೃತಸೋಮನಪ್ಪನಿಗೊಂದೇ ದಿವಸವೆ ॥ ೩ ॥ ಈ ರೀತಿ ನಾಮದಿಂದ ನೂರುವತ್ಸರಬಾಳಿ । ನಾರಾಯಣನಾ ಭಜಿಸುವ ॥ ಘೋರಪ್ರಳಯಕಾಲಕ್ಕು ಮಾರಮಣನದಯದಿಂದ ಬಾರದಜ್ಞಾನವೀತಂಗೆ॥ ಸು ॥ ೪ ॥ ಈತನಾಳಿಕೆಯೊಳು ಮೂತೊಂಭತ್ತು ಕಲ್ಪದೆ ಭೂತನಾಥಗೆ ಅಪರೋಕ್ಷ ॥ ಆತನಾರಭ್ಯನಾರನಾಗಪರ್ಯಂತ ಪರೋಕ್ಷನೀತಕಲ್ಪಗಳಲ್ಲಿ ಹದೆ ॥ ಸು ॥ ೫ ॥ ಎಲ್ಲ ದೇವರು ನಿತ್ಯದಲ್ಲಿ ಬಂದು ಬಂದೀತನಲ್ಲಿ ಉಪದೇಶ ಕೊಂಡಾರೆ ॥ ಖುಲ್ಲ ಮಾಯಿಸಮೂಹಗೆಲ್ದು ವೇದವ್ಯಾಸನಲ್ಲಿ ಅದ್ಯಾಪಿಯಿಹರೆ ॥ ಸು ॥ ೬ ॥ ಪಾನೀಯ ಜಾಜಾಂಡದೊಳು ನಾನಾ ಜೀವರಿಗೆ ಚೇತನೀತನಿಂದಲೆಯೋ ॥ ಏನು ಪೇಳಲಮ್ಮಾ ಈ ಪ್ರಾಣಿಯೊಲಿದರೆ ಶ್ರೀಪ್ರಾಣೇಶ ವಿಠಲನೊಲಿದಂತೆ ॥ ಸುವ್ವಾಲೆ ॥

## (೧೪) ಪಾರ್ವತೀದೇವಿ ಸ್ತುತಿ.

೨೯. ರಾಗ–ಶಂಕರಾಭರಣ (ಅಟ್ಟತಾಳ).

ಪಾರ್ವತೀ, ದಕ್ಷಕುಮಾರೀ–ನಿನ್ನ–ಸಾರ್ವೆ ಸಂತತಕುಜನಾರೀ ॥ ಆಹಾ ॥ ದೂರ್ವಾಸನರ್ಧಾಂಗಿ ಸರ್ವಜ್ಞೆಯನ್ನಯ ॥ ಚಾರ್ವಾಕಮತಿಕೀಳಿ ತೋರ್ವದು ಸುವಧವ ॥ ಪ ॥ ದುರ್ಗೆ ಭವಾನಿ ರುದ್ರಾಣಿ–ಗೌರಿ–ಸ್ವರ್ಗಜನಾರಾಧ್ಯಮಾನಿ ॥ ಸೇರೆ, ದುರ್ಗುಣದವರ ಸುಜ್ಞಾನಿ ॥ ಭಕ್ತವರ್ಗ ಪೋಷಕ ಶುಕವಾಣೀ ॥ ಆಹಾ ॥ ನಿರ್ಗುಣರಾದುತ್ತುಮರ್ಗೆವೊಲಿವ ಅಪವರ್ಗದ ನಾಳೆ ॥ ನರರ್ಗೆ ಮಣಿಸದಿರೆ ॥ ೧ ॥ ಚಂಡಿ ಕಾತ್ಯಾಯಿನಿ ಉಮ್ಮಾ, ನಾಲ್ಕು

ಮುಂಡೆಯುವನ ಸೊನೆಯುನ್ಮ್ಮಾ ನಾಡೆ । ಕಂಡು ಭಜಿಪೆ ನಿತ್ಯನಿಮ್ಮ । ಪಾದ
ಪುಂಡರೀಕದ್ವಯವನ್ನು ॥ ಆಹಾ ॥ ಉಂಡುವಿಷವ ನಿನ್ನ ಗಂಡಬಳಲಿ
ಕೈಕೊಂಡೌಷಧತಂಡತಂಡದಲೆನಗೀಯೆ ॥ ೨ ॥ ಪಾವಕನೊಳು ಪೊಕ್ಕ ಪತಿ
ವ್ರತೆ ॥ ಯಾವಾಗನುನಿಸತ್ಕಥೆಯಲ್ಲಿ ಭಾವನೆಕೊಡೆ ಪ್ರತಿಪ್ರತಿ–ಜಾವಜಾವಕೆ
ಷಣ್ಮುಖ ಮಾತೆ ॥ ಆಹಾ ॥ ಕೋವಿದರೊಡತಿ ಕೇಳಾವಾಗ ವೈರಾಗ್ಯವೀ
ವದು ದುರಾಪೇಕ್ಷೆ ನಾವೊಲ್ಲೆನೆಂದೆಂದೂ ॥ ೩ ॥ ಬೇಡಿದಭೀಷ್ಟವಕೊಡುವೆ ।
ದಯಮಾಡಿ ಭಕ್ತರ ಕರಪಿಡಿವೆ, ದೋಷಕಾಡುಳಿಯದಂತೆ ಸುಡುವೆ, ನಿನಗೀಡೆ
ಮಹದ್ಭಯ ಕಡಿವೆ ॥ ಆಹಾ ॥ ರೂಢೀಶ ಶಿವನೆಂದು ಆಡಿಸದಿರು ಬುದ್ಧಿಗೇಡಿ
ದಾನವರಂತೆ ನೀಡು ಶ್ರೀಹರಿಸೇವೆ ॥ ೪ ॥ ಮೇಶ ಪ್ರಾಣೇಶವಿಠಲನೆ, ಜಗ
ದೀಶನೆಂಬುವ ದಿವ್ಯಜ್ಞಾನೆ । ಕೊಟ್ಟು ಪೋಷಿಪುದನ್ನ ಸುಜಾಣೆ ॥ ನೀನು
ದಾಸಿಸೆನಾನಾರ ಕಾಣೆ ॥ ಆಹಾ ॥ ಈಶ ಪಂಚಮುಹಾದೋಷಿ ಬಿಡದೆ ನಿತ್ಯಾ
ಈ ಶರೀರದೊಳಿಹ್ಯ ಘಾಸಿ ಮಾಡುವನನ್ನು ॥ ೫ ॥

---

## (೧೫) ರುದ್ರದೇವರ ಸ್ತುತಿ.

### ೩೦. ರಾಗ–ಕಾಂಬೋಧಿ (ಏಕತಾಳ).

ಬಾಣವದನ ಸಲಹೋ–ನಾನಮಿಸುವೆ । ಬಾಣವರದ ನಿನಗೆ ॥ ಹರ
ಹರ ॥ ಪ ॥ ಕುಧ್ರೇಡ್ವ ಮುಖಕಂಜ–ರವಿ, ಅಘ–ಅದ್ರಿಸಮೂಹ ಖುಷಿ
ಜಾ ॥ ಹರಹರ ॥ ನಿದ್ರುರಹಿತವಿಭಜಾ । ಸತತ, ಅಭದ್ರ, ಭಕ್ತರಿಗೆ
ಕುಜ ॥ ೧ ॥ ಗಜಮುಖ ಅಂಬಕನೆ (೧೫)–ಪಶುಪತಿ–ತ್ರಿಜಗದಿ ಪೂಜಿತನೆ
॥ ಹರಹರ ॥ ಅಜಿನಾಂಬರಧರನೇ ಕರುಣಿಸೊ-ವಿಜಯೇಕ್ಷಣ ಶಿವನೆ
॥ ಹರಹರ ॥ ೨ ॥ ಕಾಮಾದಿ ಮುಖಜನಕ । ಧೂರ್ಜಟಿ ಭೂಮಿಜವೈರಿ
ಸಖಾ ॥ ಹರಹರ ॥ ಸಾಮಜರಿಪು, ಧನಿಕಮಿತ್ರನೆ, ಕಾಮಿತ ಫಲದಾ
ಯಕ ॥ ೩ ॥ ಧರಣಿಜೆರಮಣ ನಾಮಾ । ಸರ್ವದಾ ಸ್ಮರಿಸುವೆ ನತಪ್ರೇಮಾ
॥ ಹರಹರ ॥ ಗರಳನಾಶನ ಭೀಮ । ವಿಕ್ರಮ ಸರೋಜಧ್ವಜವಿರಾಮ ॥ ಹರ
ಹರ ॥ ೪ ॥ ಘನನಿಭಪ್ರಾಣೇಶ–ವಿಠ್ಠಲ–ನನುಗನೆನಿಪುದನಿಶ ॥ ಹರಹರ ॥
ಘನಮಹಿಮನೆ ಈಶ, ಕುಧರಸದನ ನಾಕಜಪೋಷ ॥ ಹರಹರ ॥ ೫ ॥

೩೧. ರಾಗ–ಸಾರಂಗ (ಅಟತಾಳ).

ಗಂಗಾಧರ, ಸುಮತಿಪಾಲಿಸೋ । ಪಾಂಡು । ರಂಗನ ಚರಣಾಬ್ಜ ಭಜನೆ ಮಾಡಲು ನಿತ್ಯ ॥ ಪ ॥ ವೈಕಾರಿಕಾದಿತ್ಯ ರೂಪ–ದನುಜರಿಗೆ ಶೋಕಕೊಡುವದು ನಿರಂತರದಿ ॥ ಲೌಕಿಕವೆಲ್ಲ ವೈದಿಕವಾಗಲೆನಗೆ ಮೈನಾಕೀಹೃತ್ಕಮಲ ಮಾರ್ತಾಂಡ, ಭಕ್ತವತ್ಸಲ ॥ ೧ ॥ ವಾಸವಾದ್ಯಮರ ವಂದಿತನೆ, ಪದ್ಮಜ ಸುತ–। ನೀ ಸಲಹುವದೋ ಕೈಲಾಸವಾಸ ॥ ಕ್ಲೇಶವೋದವು ಸಮತಿಳಿಸೋ ಅಶ್ವತ್ಥಾಮ । ದೋಷರಹಿತನೆ ದಕ್ಷಾಧ್ವರನಾಶಕ ॥ ೨ ॥ ಪವಮಾನತನಯ ನಿನ್ನವರಲ್ಲಿ, ಕೊಡು ಸ್ನೇಹ, ದಿಬ್‌ವಸನಾದಿಯಲ್ಲಿ-ಯನ್ನಿರವಬಲ್ಲಿ ॥ ಅವಲೋಕಿಸದೆಯನ್ನನೇಕ ಪಾಪಗಳನ್ನು । ತವಕ ಉದ್ಧರಿಸೋ ವಿಯತ್ಪತಿ ಜನಕನೆ ॥ ೩ ॥ ನಾಮಜಾಜಿನವಸ್ತ್ರ ಭಸ್ಮಭೂಷಿತದೇವ । ಸೋಮಶೇಖರನ ಬಿನ್ನಪವಕೇಳು ॥ ಪ್ರೇಮದಿಂದಲಿ ಭಾಗವತರಸಂಗತಿ ನಿತ್ಯ । ಶ್ರೀಮನೋರಮನ ಚರಿತಪಾಡಿಸುವದಯ್ಯ ॥ ೪ ॥ ಶ್ರೀಕಂಠ, ನೀವೇಳಿದನ್ಯಶಾಸ್ತ್ರಕೆ ಬುದ್ಧಿ ನೋಕದೆ, ಗುರುಮಧ್ವಮುನಿಮತವೇ ಬೇಕು, ಜನುಮ ಜನ್ಮಕ್ಕನಿಸೋ, ತ್ರಿಯಂಬಕ ನಾ ಕೈಯ್ಯಮುಗಿವೆ ಪ್ರಾಣೇಶ ವಿಠಲದಾಸ ॥ ೫ ॥

೩೨ ರಾಗ–ವರಾಳಿ (ಏಕತಾಳ).

ಪಾರ್ವತೀ ಪತಿಪಾಹಿ ॥ ಪಾರ್ವತೀಪತಿ ನೀನೊಲಿದು ಮನಸಿನೊಳು ತೋರ್ವದು ಕೇಶವನ ॥ ಹರಹರ ॥ ವಿಜಯನಿನ್ನೊಳಗಂದು–ವಿಜಯಿಸಲಸ್ತ್ರವ । ತ್ರಿಜಗವರಿಯೆಕೊಟ್ಟ ॥ ಮಜಭಾಪುರೆ ಅಂಬುಜಸುತನಂದನ–ಗಜಚರ್ಮಾಂಬರನೆ ॥ ೧ ॥ ಹರಹರ ॥ ಜಾತವೇದಸ, ಶಶಿತರಣಿನಯನ । ಮಾತರಿಶ್ವತನಯ ॥ ಭೂತಗಣಪ, ಗುಣವ್ರಾತ, ನಿನ್ನವರೊಳು । ಪ್ರೀತಿಯಿಂದಲೆ ಕೂಡಿಸು ॥ ಹರಹರ ॥ ೨ ॥ ಕ್ಷಿತಿಧರಶರ, ಮನ್ಮಥ ಪುರಹರಣ, ಪ್ರಮಥಾಧಿಪ, ಹರಿಣಾಂಕ ॥ ನತಿಸುವೆ ನಿನ್ನನು ಪ್ರತಿದಿನದಲಿ ಸನ್ಮತಿಕರುಣಿಸು ತ್ವರಿಯಾ ॥ ॥ ಹರಹರ ॥ ೩ ॥ ಸುರಸೇವಿತಪದ ಅರವಿಂದ ಅನಘ, ಮುರರಿಪು ಸಖ ಕಪರ್ದಿ ॥ ಚರಣವನಂಬಿದವರ ಭಯವಾರಿದ–ಮರುತಕುಶಂದನನೆ ॥ ಹರಹರ ॥ ೪ ॥ ಖಟವಪಾಣಿ ಖಳ ಆಟವಿವಹ್ನಿ ಧೂರ್ಜಟಿ ಹರ, ಪ್ರಾಣೇಶ–।

ವಿಠಲನ ಭಜನೆಯು ಘಟಕತಪ್ಪದಲೆ ಘಟನೆಮಾಡಿಸುವುದೋ ॥ ಹರ ಹರ ॥ ೫ ॥

೩೩ ರಾಗ-ರೇಗುಪ್ತಿ (ತ್ರಿಪುಡೆತಾಳ).

ಗಂಗಾಧರದೇವ-ಜಯಗೀಷವ್ಯಾನಂಗಾರಿ ಗಿರಿಜಾಧವ ॥ ಮಂಗಳ ಪ್ರದನೆ- ಅಮಂಗಳಶೀಲ ಭುಜಂಗರೂಪದಿ ಪಾಂಡು । ರಂಗಘಾಸಿಗೆಯಾದ ॥ ಪ ॥ ವೈಕಾರಿಕಾಹಂಕಾರ- ತತ್ವದೊಡೆಯ- ನಾಕುಮೊಗನ ಕುಮಾರ ॥ ಶ್ರೀಕಂಠ, ಸ್ಥಾಣು, ವಿಶ್ವೋಜನಕ, ಚಂದ್ರ । ಶೇಖರ, ಈಶ ಪಿನಾಕಿ ಭಕ್ತವತ್ಸಲ ॥ ಶೋಕನಾಶನ ಶಂಭು, ಪಶುಪತಿ । ಹೇಕರುಣಿ, ಸದ್ಗುಣ ಸುಖಾರ್ಣವ । ಪಾಕಶಾಸನ ಪ್ರಮುಖವಂದ್ಯ, ವಿಶೋಕ, ಯನ್ನಭಿಲಾಷೆ ಪೂರ್ತಿಸು ॥ ೧ ॥ ಪ್ರಾಣನಂದನ, ತೈಜಸಾಹಂಕಾರಾಭಿಮಾನಿ, ಶ್ರೀಶುಕ, ದೂರ್ವಾಸ ॥ ಕ್ಷೋಣಿಸಂಧೃತಧನ್ವಿ, ದಾನವಾಂತಕ, ಶೂಲಪಾಣಿ ಪ್ರಮಥಾಧಿಪ ಬಾಣವರದಯನ್ನ ॥ ಮಾನನಿನ್ನದು ಚಕ್ರಪದಕಂಜರೇಣು ತೋರಿಸು ತವಕದಿಂದಲಿ । ದ್ರೌಣಿ, ಶಿವ, ಪ್ರಣತಜನಸುಮನಸಧೇನು, ತವ ಪದನಾರ್ಪೆ ಸತತ ॥ ೨ ॥ ತಾಮಸಾಹಂಕಾರೇಶ, ಸಂಕರ್ಷಣನಾ ಮಗನೇ ಕೊಡುಲೇಸ, ರಾಮನಾಮ ಮಂತ್ರ-ಪ್ರೇಮದಿ ಜಪಿಸುವ । ಸ್ವಾಮಿ, ಅನಲ ವಹ್ನಿ ಸೋಮಲೋಚನ ಹರ ॥ ವಾಮದೇವ, ಕಪರ್ದಿ, ಭವಭಯಭೀಮ, ಶ್ರೀಪ್ರಾಣೇಶವಿಠಲನ ಪ್ರೇಮಪುಟ್ಟನೋ ರೌಪ್ಯಪರ್ವತಧಾಮ ಶ್ರೀವಿರೂಪಾಕ್ಷಗುರುವೇ ॥ ೩ ॥

೩೪. ರಾಗ-ಶಂಕರಾಭರಣ (ಅಟತಾಳ).

ಮಹಾದೇವ, ಶಿತಿಕಂಠ, ದಾಸ-ಕಲ್ಪಮಹೀಜ, ಬಿನ್ನವಿಪೆ ನಿರ್ದೋಷ ॥ ಆಹಾ ॥ ಉಪಕಾರಿ, ಹರಿಪಾದಮಹಿಮೆ ಕೊಂಡಾಡಿಸೋ । ಗಹನ ವಿಕ್ರಮ ಭೀಮ । ಮಹೀಧರಪಜಾಧವ ॥ ಪ ॥ ಸ್ಫಟಕಾಭ, ಶ್ರೀಕಂಠ, ದಕ್ಷ-ಧ್ವಂಸಿ, ನಿಟಲಲೋಚನ ಸುರಪಕ್ಷ ॥ ಹೇ ಧೂರ್ಜಟಿ, ಹೀನ ವಿಷಯಾಖ್ಯ ಕಕ್ಷ-ವಹ್ನಿ, ಕುಟಿಲತ್ವ ಬಿಡಿಸತಿ ದಕ್ಷ ॥ ಆಹಾ ॥ ಕಠಿಣಸಂಸಾರದಿ ತ್ರುಟಮಾತ್ರ ಸುಖಕಾಣೆ । ವಟುರೂಪಿ ಭಕತರ ಕಟಕದೊಳಿರಿನೆನ್ನ ॥ ಮಹಾ ॥ ೧ ॥

ಇಳಿರಥ, ನಗಶರ, ಸೋಮ-ವರೌಳಿ, ನಳನಂದಿನಿಪಸುತ, ರಾಮ–ನಾಮಾ ನಲಿದುಪಾಡುವ ಗುಣಧಾಮ । ರೌಪ್ಯಾಚಲಾವಾಸಾನಂಗವಿ ರಾಮಾ ॥ ಆಹಾ ॥ ಹಲವರಾಶ್ರಯಿಸಿ ನಾ ಬಲು ನೊಂದೆನೋರ್ವರು ಕಾಯ್ವ ಸುಳಿವು ಕಾಣೆನೋ ಹೇ ಗರಳಕಂಠ ಪೊರೆಯೆನ್ನ ॥ ೨॥ ಪಂಚಸುಸ್ಮಿತಯುಕ್ತ ವದನಾ-ಸಿಪ್ತ್ರಪಂಚ ಗಜಾಸುರಹನನಾ । ಏಕಪಂಚಾಸ್ಯಜನಕ, ಕೇಶವನಾ । ಪ್ರೀತಿ-ಮಂಚನೀನಾಹೆ ಖಳರನಾ ॥ ಆಹಾ ॥ ಮಿಂಚಾಗಿ ಅಳಿವಂಥ ಹಂಚಿಕೆ ಯಲಿ ವರ ಮುಂಚೆ ಕರೆದುಕೊಟ್ಟು ವಂಚಿಪೆ ಅತ್ರಿಜ ॥ ೩ ॥ ಅಹಂಕಾರಾ ಧೀಶ ನಭೇಶ–ತಾತ, ಮಹಾಮುನಿವಂದ್ಯಾಮರಾಸ್ಯ, ಚಂದ್ರ–। ದಿನಪತೇ ಕ್ಷಣನ ಅಶೇಷಾ ನೋದ–ಬಹುವೋದಸಕ್ತಾಯನ್ನಾಶಾ-ಆಹಾ ॥ ದಹಿಸೊ ಜರರ ಪೋಷ ನಹುಸಿ ಬೆಂಡಾದೆನೊ । ಅಹಿಮಲಾಂಧಕಾಸುರ । ಗುಹಹ ಅಶ್ವ ತ್ಥಾಮ ॥ ೪ ॥ ಶಕ್ರಾನರಜ ಶ್ರೀಪ್ರಾಣೇಶ-ವಿಠಲ, ನಕ್ರಾಹನಂಘ್ರಿಯನಿಶ ದಲ್ಲಿ, ವಕ್ರವಿಲ್ಲದೆ ಸೇವಿಪೀಶ । ಹೇ ತ್ರಿವಿಕ್ರಮ ಶರ ವ್ಯೋಮಕೇಶ, ॥ ಆಹಾ ॥ ಶುಕ್ರಪೂಜಿತಪಾದ ಅಕ್ರೂರ ಯುಸ್ನೊಳಿದ್ದ ಕ್ರಮವೆಣಿಸದೆ । ಸುಕೃತವೊದಗಿಸೊ ॥ ೫ ॥

### ೩೫. ರಾಗ–ಸೌರಾಷ್ಟ್ರ (ಝಂಪೆತಾಳ).

ಎಷ್ಟೊ ಹರಿ ಮರುತರ ಕೃಪಿನಿನ್ನಲ್ಲಿ। ಕೆಟ್ಟುದೇ ಭೂಷಣವಾಗಿಹುದೊ ಪಾರ್ವತೀರಮಣ ॥ ಪ ॥ ವಿಷವನ್ನ ಭೋಜನವಮಾಡಿ ಜೀರ್ಣಿಸಿಕೊಂಡಿ । ವಸನಬಿಟ್ಟುಜಿನಸ್ಥಿ ಭಸ್ಮ ಧರಿಸಿ । ವೃಷಭವಾಹನನಾಗಿ ಭೂತ ಪ್ರೇತ ಗಳೂಳು ಸ್ಮರಿಸದ ಭೂಮಿಯೊಳಿರಲು ಪೂಜಿಪರು ಸುರರೆಲ್ಲ ॥ ೧ ॥ ತಂದೆತಲೆಕಡಿವದಕ ಕುಂದು ಹೊಂದದಲಿದ್ದೆ, ನಿಂದಿತನ ಶಿರದಮೇಲಿರಿಸಿ ಯಿದ್ದೆ । ಒಂದೊಂದೆ ನೀನೆ ವರದೈವ ಎಂದು ಪೇಳ್ದೆ ಗೋವಿಂದನಿಂದರ್ಚನೆಯ ಕೊಂಡ ಭಳಿಭಳಿರೆ–ಶಿವ ॥ ಎಷ್ಟು ॥ ೨ ॥ ಗುರುವೆನಿಸಿಕೊಂಬೆ ಪ್ರಾಣೇಶ ವಿಠಲನೊಳು ಮತ್ಸರಿಸುತಿಹ ಖಳರಿಗೆ, ಇದಲ್ಪವೇನೊ ॥ ಸರಿವಬ್ಬರಿಗೆ ಆಹೆ ನಂಬುವನು ಕೆಡುವ ನೀ। ಉರುಗನಂತಾಗಬೇಕೆಂದಾಗಿ ಮೆರೆದೆಲವೊ ॥ ೩ ॥

## (೧೬) ಹರಿಹರನ ಪರವಾಗಿ.

೩೬. ರಾಗ–ಸಾವೇರಿ (ಅಟತಾಳ).

ಇಂದು ನೋಡಿದೆ ಹರಿಹರನ-ದೈತ್ಯವೃಂದಕಪ್ರಿಯುನ ವರವ ಕೊಡು ವನಾ ॥ ಪ ॥ ಶಾಮವರ್ಣನ–ವಿಷಹರನ, । ಪೂರ್ಣಕಾಮನ–ಶಿವನ, ಕೇಶ ವನ,–ಶಂಕರನ ॥ ಕಾಮಿನಿಯರ ಮೋಹಿಸಿದನ । ಚಂದ್ರ-ವ್ಯೋಮನದಿಯು ಮಸ್ತಕದೊಳೂಪ್ಪುವನ ॥ ೧ ॥ ಕರಿಬಾಧೆಯನು ಕಳೆದವನ-ಭಸ್ಮಧರನ ಪೀತಾಂಬರನಿಭ ಚರ್ಮಾಂಬರನ ॥ ಅರಿಧರನ–ಶೂಲಕರನ । ಲಕ್ಷ್ಮೀವರನ-ಗೌರಿವನ, ರಕ್ಷಕನ–ಶಿಕ್ಷಕನ ॥ ೨ ॥ ಸ್ವಾಮಿಪ್ರಾಣೇಶವಿಠ್ಠಲನ, ರಾಮ ನಾಮವೇ ತಾರಕವೆಂದು ಪೇಳುವನ ॥ ಶ್ರೀಮಧ್ವಮುನಿಗೊಲಿದವನ-ಪಾರ್ಥ ಪ್ರೇಮಕೆ ಮೆಚ್ಚಿ ಬಾಣವನು ಕೊಟ್ಟವನ ॥ ೩ ॥

---

## (೧೭) ಭಾರತೀದೇವಿ ಸ್ತುತಿ.

೩೭. ರಾಗ–ನಾಟಿ (ಝಂಪೆತಾಳ).

ಶರಣು ಭಾರತೀತಾಯೆ । ಕರವ ಬಿಡದಲೆ ಕಾಯೆ ॥ ಸುರುತ ದೇವನರಮಣಿ– ಸುರನದಿಸುಭಗಿನಿ । ಪ ॥ ಪ್ರದ್ಯುಮ್ನದೇವಸುತ । ರುದ್ರಾದಿಸುರವಿನುತೆ । ಭದ್ರವಿಗ್ರಹೆ ದಯಾಸಮುದ್ರೆ, ಕುಲಿಶೆ– ಅದ್ರಿಯೋ ಪಮದೋಷಕಿದ್ದ ದುರ್ಮತಿ ಕ್ಲೇಶ । ಒದ್ದು, ನಿನ್ನವನೆನ್ನು–ಬುದ್ಧಿಕೊಡು ಇನ್ನೂ ॥ ೧ ॥ ನೀರಜಾಂಬಕೆಯನೆಗೆ–ತೋರು ಸಾಧನ, ಕುನಗೆ । ಜಾರಿಸು, ಭಕುತಿಯನ್ನು–ತೋರು, ಕರುಣಾ । ವಾರಿಧಿ ಹರಿಯಪಾದ ಆರಾಧಿಸಲು ಮೋದ, ವಾರವಾರಕೆ ಈಯೇ–ವಾರಣಗಮನೆಯೇ ॥ ೨ ॥ ಪ್ರಾಣೇಶ ವಿಠಲನ । ಧ್ಯಾನದೊಳಗಿರಿಸು ಮನ । ವಾಣೀವದವ್ವೈದುವಳೇ । ಮಾನ ನಿನ್ನದೆಲೆ ॥ ಹೀನವಿಷಯಗಳೊಲ್ಲೆ–ನೀನೇ ಸ್ವಾಂತದಿ ನಿಲ್ಲೆ । ಕ್ಷೋಣಿ ಯೊಳಗತಿಮಾನೀ–ಜ್ಞಾನೀ ಅಹಿವೇಣೀ ॥ ೩ ॥

೩೮. ರಾಗ– ಭೈರವಿ (ತ್ರಿಪುಡೆತಾಳ).

ಶರಣು ಶ್ರೀ ಮಾರುತನ ರಾಣಿಯೆ । ಶರಣು ಮಂಗಳ ಶ್ರೋಣಿಯೇ । ಶರಣುಸ್ಮಿತಮುಖ ಉರಗವೇಣಿಯೆ । ಶರಣು ಸರಸಿಜಪಾಣಿಯೇ ॥ ಶರಣು ಶರಣು ॥ ಪ ॥ ಇಂದ್ರುನೇನೆ ಪುರಂದರಾರ್ಚಿತೆ । ಇಂದಿರಾಪತಿ ಕೃಷ್ಣನಾ ॥ ನಂದದಲಿಸೇವಿಸುವ ಭಕುತಿಯು ಇಂದುಧರನಿಗೆ ಕೊಡುವಳೇ ॥ ೧ ॥ ಗರುಡನುತಪದಸರಸೀರುಹೆ ವೃಕೋ । ದರನ ಪ್ರೀತಿಗೆ ಯೋಗ್ಯಳೇ ॥ ತರುಣೀಶಿರೋಮಣಿ ದುರ್ಮತಿಯುಕಳೆದು । ಕರುಣದಲಿ ಕರಪಿಡಿವುದೇ ॥ ೨ ॥ ವಿದ್ಯುನ್ನಾಮಕೆ ಧಾತಜಾತಳೆ । ಶ್ರದ್ಧೆದಾತೆ ನಿರಂತರ ॥ ತಿದ್ದಿಯನ್ನ ವಕ್ರಮತಿಯು ದ್ರುಹಿಣ ವಿದ್ಯೆ ಪಾಲಿಸಭಾರತೀ ॥ ೩ ॥ ಕಾಳೀ ದ್ರೌಪದಿ ಸ್ಥಾಣುಕನ್ಯಾ–ಶೈಲಜಾದಿ ನಮುಸ್ಕೃತೇ ॥ ಕಾಲಿಗೆರಗುವೆ ಯನ್ನ ಬಿನ್ನಪ । ಕೇಳಿ ಜ್ಞಾನವಪ್ರೇರಿಸೇ ॥ ೪ ॥ ಗಜಗಮನೆ ನಳನಂದಿನಿ ಅನಘೆ–ಸುಜನ ಹೃದಯ ನಿಕೇತನೆ ॥ ತ್ರಿಜಗಪತಿಪ್ರಾಣೇಶವಿಠಲನ ಭಜನೆಯೊಳು ಮನನಿಲ್ಲಿಸೇ ॥ ೫ ॥

೩೯. ರಾಗ–ರೇಗುಪ್ತಿ (ತ್ರಿಪುಡೆತಾಳ).

ಕಾಳೀ ದ್ರೌಪದಿ ಭಾರತೀ–ನಿನ್ನ ಪಾದಕೆ ಲಾಲಾಜನುತಿಪೆ ಪ್ರತಿ ॥ ವೇಳೆಯೊಳಗೂ ಲಕ್ಷ್ಮೀಲೋಲನ ಚರಣಾಬ್ಜಪಾಲಗವೀಯೇ ಸುಶೀಲೆ ಸ್ವಯಂಭುಜೆ ॥ ಪ ॥ ಇಂದ್ರುಸೇನಾ ನಳನಂದಿನಿ, ಶಿವಕನ್ಯಾ, ನಂದಪೂರಿತಳೆ, ಚಂದ್ರ ॥ ನಿಂದಾಕರಿ, ಪುಜ್ಞಾನ । ಸಾಂದ್ರೆ, ಸುಪತಿವ್ರತೆ, ಕಂದುಗೊರಳ ವಾರುಣೀಂದ್ರ ಅಂಡಜಾಧಿಪ–॥ ಇಂದ್ರುನಿರ್ಜರವೃಂದ ಮುನಿಗಣ ವಂದಿತ ಪದಾರವಿಂದೆ, ಭವದಲಿ । ನೊಂದೆ, ಭಯುಪಾರೆಂದು (ನಿನ್ನೊಡಿಪೆಂದ ದಲಿ ನಿನ್ನಡಿ ಪೊಂದಿಬೇಡುವೆ ನಂದದಲಿ) ಕೊಡೆ (ಅ) ಮುಂದಕರುಣೆ ॥ ೧ ॥ ತರುಣಿಯಾನಂತ ಭಾನೆ । ಪ್ರದ್ಯುಮ್ನ ದೇವರಸುತೆ ಕ್ಲೇಶಹರಿಸೆ ॥ ಹರಹಿಯೆನ್ನಯ ಮೇಲೆ ಕರುಣಾಪಾಂಗದ ದೃಷ್ಟಿ । ದುರುಳಮತಿಯು ಪರಿಹರಿಸಿತವಕ ಹರಿ ॥ ಗರಗೊ ಮನಕೊಡು । ಪರಮಧಾರ್ಮಿಕ ಕರೆಪೆಬಂದೀ, ಗಿರಿಹೃದಾಬ್ಜದಿ । ಉರುಪರಾಕ್ರಮೆ ಪರತರಳೆ ಸದಾಪೊರೆಯೆ ಬಿಡದಲೆ ಕರವಮುಗಿಪೆ ॥ ೨ ॥ ವಾಣೀ ಸುಂದರಿ, ವರದೆ, ಸಾಧ್ವೀ ವೀಣಾಪಾಣಿ

ಪೇಳುವೆನೆ, ಇದೇ, ॥ ಹೀನವಿಷಯುವಲ್ಲಿ? । ಪೋಣಿಸಿಸುಮತಿ ಶ್ರೀ ಪ್ರಾಣೇಶ ವಿಠಲನ । ಧ್ಯಾನದೊಳಿಹ ಮಹಾನುಭಾವರ ಸಂಗಪಾಲಿಸೇ ॥ ಮಾನಿನೀಕುಲಮೌಳಿಮಣಿ ಚಂದ್ರಾನನೆ ಮದಗಜಗಮನೆ ಸುಶ್ರೋಣಿ ಅಷ್ಟಾವದ ಸುಕಾಂತೆ ॥ ಕಾಳೀ ॥ ೩ ॥

೪೦ ರಾಗ–ನಾಟಿ (ಝಂಪೆತಾಳ).

ಕಾಯೆ ಭಾರತೀ ನಿನ್ನ-ಆರಾಧಿಸುವೆಯನ್ನ— ನಾರಾಯಣಮಂದಿರಸವರ ಕಿಂಕರನುಯನಿನೇ ॥ ಪ ॥ ಯೋಮಜರಮಣಿ, ನಳಿನಭವಜಾತೆ ಕೃತಿಪುತ್ರೆ । ನಾಮಜಗಮನೆ ಉರಗವೇಣಿ ಕಾಳೀ । ಸೋಮಮುಖಿ, ಬೇರೊರಸಿಯನ್ನ ದುರ್ಮತಿಯಳಿದು ರಾಮಧ್ಯಾನದಲಿ ಮನನಿಲ್ಲಿಸುವದನಿಶ ॥ ೧ ॥ ಲೋಕನಾಯಿಕೆ, ಶೈಲಜಾಪತಿ ಮುಖ ಪೂಜಿತಳೆ ನೀಕರುಣದಲಿ ನೋಡಿ ಕರವಪಿಡಿಯೋ ॥ ಕಾಕುಮನುಜರ ಸಂಗವನು ಕೊಡದೆಯೊಂದಿನಕು ಲೌಕಿಕವ ಸಂಪಾದಿಸಿಸಬೇಡವಮ್ಮ ॥ ೨ ॥ ಕೃಷ್ಣೆ, ನಳಸಂದಿನಿ, ದ್ರುಪದ ತನುಜೆ, ಶಿವಕನ್ಯೆ, ದುಷ್ಟಜನಗಿರಿಕುಲಿಶೆ, ಸ್ವರ್ಣಗಾತ್ರೆ ॥ ಕೊಟ್ಟ ಮಾತಿಗೆ ತಪ್ಪದಲೆ ಕಾಯ್ವ ಪ್ರಾಣೇಶವಿಠಲನ ಚರಣಯುಗ ಸರಸೀರುಹ ಭೃಂಗೆ ॥ ೩ ॥

೪೧. ರಾಗ-ಕೇದಾರಗೌಳ (ಝಂಪೆತಾಳ).

ಏನು ಮರುಳಾದೆವ್ವ ಎಲೆ ಭಾರತಿ । ನೀನರಿಯೆ ಪವನನಿಂಥವನೆಂಬುದು ॥ ಪ ॥ ಕಲ್ಲು ಹೊರುವನು ಮತ್ತೆ ಯಾರಿಂದಲಾಗದವು । ಎಲ್ಲರಂತಲ್ಲ ಕಪಿರೂಪ ನೋಡು ॥ ಖುಲ್ಲ ಫಲಪುಷ್ಪಯುಕ್ತ ವನವನು ಕೆಡಿಸಿದನು । ಎಲ್ಲಿಂದ ವದಗಿದನೊ ಈ ಪತಿಯು ನಿನಗೆ ॥ ೧ ॥ ರಕುತವಂ ಪಾನಮಾಡಿದನಂತೆ ಕೇಳಿದೆಯಾ । ರಕ್ಕಸೊಬ್ಬಳು ನಿನಗೆ ಸಂವತಿ, ಇಹಳೂ । ಮಕ್ಕಮಾರೀ ಮಗನುಂಟು, ಗಂಡನು ಓದನಕ್ಕೆ ಗತಿಯಿಲ್ಲದಲೆ ಭಿಕ್ಷಬೇಡುವನು ॥ ೨ ॥ ಹುಟ್ಟು ಬಡವವ ತಾನಾದರೇನಾಗಲಿ ನಿನ್ನ । ಬಿಟ್ಟು ತುರ್ಯಾಶ್ರಮವ ಧರಿಸಿಕೊಂಡು ॥ ದೃಷ್ಟಿಗೋಚರನಾಗದೆ ನರರಿಗೆ ಪ್ರಾಣೇಶವಿಠಲನ ಬಳಿಯಲ್ಲಿ ಬದರಿಯೊಳು ಸೇರಿಹನು ॥ ೩ ॥

೪೨ ರಾಗ–ಶಂಕರಾಭರಣ (ಅಟತಾಳ).

ದ್ರೌಪದಿ ಕೃಷ್ಣಾ ಪಾಂಚಾಲಿ । ದೇವಿ । ಗೋಪತಿಧ್ವಜವಂದ್ಯೆ ಕಾಳಿ । ಆಹಾ । ಪಾಪಗಳೆಣಿಸದಲೇ ಪುನೀತನಮಾಡೆ ಶ್ರೀಪವನನ ಕರುಣಾಪಾತ್ರೆ ಸುಚರಿತ್ರೆ ॥ ಪ ॥ ವಾಣೀ ಭಕ್ತಿಗೆ ಅಭಿಮಾನಿ । ತಾಯಿ । ನೀನೇ ಗತಿ ಯೆಲೆ ಸುಶ್ರೋಣಿ । ಶ್ರೀಶಧ್ಯಾನವ ಮಾಡಲು ಮನವೋಣಿಸುವದೇನ ನೊಲ್ಲೆನು ಪೂರ್ಣ ಜ್ಞಾನಿ ॥ ಆಹಾ ॥ ದೀನರಕ್ಷಕೆ ಮಿಕ್ಕ ಹೀನ ದೇವರ ಪಾದಕ್ಕೆ ನಮಿಸುವ ಮತಿಯನೆಂದು ಕೊಡದಿರೆ । ೧ ॥ ಶಾರದೆ ಹರಿಯ ಕುಮಾರಿ–ನಿನ್ನ–ಸಾರಿದೆ ಕುಜನ ಕುಠಾರಿ । ದಯಾವಾರಿಧೆ ಸುಜನೋಪ ಕಾರಿ । ತೋರೆ । ಸಾರೆಗರೆದು ಮುಕ್ತಿದಾರಿ ॥ ಆಹಾ ॥ ಶ್ರೀರಮಣ್ಯಾಳಿದೆಲ್ಲ ನಾರೀ ಶಿರೋಮಣಿ ॥ ಅರಾಧಿಸುವೆಯನ್ನ ದೂರನೋಡಲು ಬೇಡ ॥ ೨ ॥ ಹಲ ವರಿಗೆಲ್ಲ ಬಾಯ್ದೆರೆದು–ಬೇಡಿಕೊಳವದೇನವೆ ದಿನ ಬರಿದು । ಸಾಧು ನೆಲೆಯು ದೋರರು ಪತ್ಯಾಗರೆದು । ಬುದ್ಧಿ–ಕಲಿಸೆ ಭಾರತಿಯನ್ನ । ಮರೆದು ॥ ಆಹಾ ॥ ಇಳೆಯೊಳು ಶ್ರಮ ಪಡಿಸಲು ಸಲ್ಲ, ದಿತಿಜರ ನಳಿದ ಪ್ರಾಣೇಶ ವಿಠಲ ಗಚ್ಚಿನ್ನ ಭಕ್ತಳೆ ॥ ೩ ॥

## (೧೮) ಸರಸ್ವತೀ ಸ್ತುತಿ.

೪೩. ರಾಗ–ನಾಟ (ಝಂಪೆತಾಳ).

ಪಾಹಿ ಸರಸ್ವತಿ ಸುಗಾಯಿತ್ರಿ ಶ್ರೀಸಾವಿತ್ರಿ । ಮಹಾದುರಿತಾದ್ರಿಪವಿ ದೀನಸುರಧರಿಜೆ ॥ ಪ ॥ ಶಿಷ್ಟಜನರ ಪಾಲಿಪಳೆ । ದುಷ್ಟ ಜನ ದೂರಳೆ ಸೃಷ್ಟಿಪತಿ ಸೇವೆಯೊಳಗಿಟ್ಟು ದುರುಳ ಬಟ್ಟೆ ಹಿಡಿಸದಲೆ ದಯವಿಟ್ಟು ಪಿಡಿವದು ಕೃಯು, ಕಷ್ಟ ನಾಶನ ಮಾಡೆ, ಕೊಟ್ಟು ಸುಖ, ಪೂಜ್ಯೆ ॥ ೧ ॥ ಮದನ ಸತಿಕೋಟಿಲಾವಣ್ಯೆ । ಗುಣಸಂಪನ್ನೆ । ಸುದತೀವೃಂದಶಿರೋಮಣಿ ಕರುಣಾ ರ್ಣವೆ ॥ ಮಧುಜಿತ್ಪ್ರಿಯನ ರಾಣಿ ವಾಣೀ ವೀಣಾಪಾಣಿ । ಹೃದಯದೊಳು ಕಮಲನಾಭನ ನಿರುತ ತೋರೇ ॥ ೨ ॥ ಈಶಾದಿಸುಮನಸಾರ್ಚಿತಪಾದ ಸರಸೀರುಹೆ । ಲೇಶತರಾನಂದೆ ಸುಗುಣೆ, ಶ್ರೀಪ್ರಾಣೇಶವಿಟ್ಠಲನ ಕೊಂಡಾ ಡುವರೊಳಗೆ ಸ್ನೇಹ । ಹ್ರಾಸವಾಗದೆಯೀಯೆ । ಇಭರಾಜಗಮನೆ ॥ ೩ ॥

## (೧೯) ವಾಯುದೇವರ ಸ್ತುತಿ.

೪೪. ರಾಗ–ಸಾರಂಗ (ತ್ರಿಪುಡೆತಾಳ).

ನಮೋ ನಮೋ ಗುರುವಾತ । ನಿನ್ನ ಚರಣಯುಗಳಕೆ ಕಮಲನೇತ್ರನ ದೂತ ॥ ನೆರೆನಂಬಿದಜನರ ಶ್ರಮವನೀಗುವ ದಾತ । ಮೂಜಗದಿ ನಿನ್ನ ಮಹಿಮೆಯ ಬಲ್ಲರೋ ಖ್ಯಾತ ॥ ಶ್ರೀಕಾಳೀನಾಥ । ತಿಮಿರರಿಪು ನಿಭ । ಅಮರವಂದಿತ, ಡಮರುಧರಪಿತ ಸಮೀರದೇವ ॥ ನಮೋ ನಮೋ ॥ ಪ ॥ ತ್ರೇತಯುಗದಲಿ ಅಂದು-ಹನುಮಂತ, ಶ್ರೀರಘುನಾಥನಲ್ಲಿಗೆ ಬಂದು । ಪರಮಾತ್ಮ ನಿನ್ನಯ ಮಾತು ಕೇಳುವೆನೆಂದು ಕೈಕೊಂಡು ಸೇವೆಯಾನಾಥಜನಕುಮುದೇಂದು । ಕರಮುಗಿದು ನಿಂದು ॥ ಆತರಣಿಕುಲಜಾತನುಂಗುರ ವಾತುರದಿ ಕೊಂಡಾತವೇಗದಿ । ಸೀತೆಗರ್ಪಿಸಿ ಭೀತಿಯಿಲ್ಲದೆ ಪಾತಕರ ಬಹು ಘಾತಿಸಿದೆಯೆಲೊ ॥ ನಮೋ ನಮೋ ಗುರುವಾತ ॥ ೧ ॥ ಕುಂತಿಯಲಿ ಅವತಾರ ಮಾಡಿದೆಯೊ ಕುರುಕುಲಕೆ ಅಂತಕ ಖಳಕುಠಾರಾ । ಸೀಳಿದೆಯೊ ಮಗಧನ ಸಂತರೊಡೆಯವುದಾರ ॥ ವಿಕ್ರಮನೆ ಬಹು ಗುಣವಂತ ಕಲ್ಮಷದೂರಾ । ಆಕೀಚಕರಾ ॥ ಸಂತತಿಯ ನಳಿದಂಥ ನಿಜ ಬಲವಂತ, ನಿನ್ನಯ ಪಂಥಗೆಲಿಸಿದೆ, ದಂತಿಪುರದರಸಂತಕಾತ್ಮಜನಂತುನೆಲಸಿದಿ ಚಿಂತಾರಹಿತ ॥ ನಮೊ ನಮೊ ॥ ೨ ॥ ಕಲಿಯುಗದಿ ಮುನಿಯಾಗೀ–ಪ್ರಾಣೇಶವಿಟ್ಠಲನೊಲುಮೆಯನು ಚೆನ್ನಾಗಿ । ಗಳಿಸುತಲಿ, ಸೂತ್ರಗಳೂಲಿಸಿ ಬಹು ಸ್ಪಷ್ಟವಾಗಿ ॥ ಗ್ರಂಥಗಳ ವಿರಚಿಸಿ । ಹಲವು ಮತಗಳ ನೀಗಿದಂಥ ಮುನಿಯೋಗಿ ॥ ಕಳೆದು ಸುಜನರ ಮಲಿನವನು ಈ ಇಳೆಯೊಳಗೆ ಬಹು ಬೆಳದೆ ನಿನ್ನ ಮತ, ಚಲುವ ಯತಿಯನಗೊಲಿದು ಸನ್ಮತಿ ಕಲಿಸುವದು ಕರಗಳನು ಬಿಡದಲೆ ॥ ನಮೋ ನಮೋ ॥ ೩ ॥

೪೫. ರಾಗ–ವರಾಳಿ (ಅಟತಾಳ).

ಶರಣು ನಿನ್ನ ಚರಣಗಳಿಗೆ ಭಾರತೀಶನೆ । ಕರವ ಪಿಡಿದು ಸಲಹೋ ಬಿಡದೆ ಭಾರತೀಶನ ॥ ಪಲ್ಲ ॥ ಎಲ್ಲ ಕಡೆಗೆ ವ್ಯಾಪ್ತನೀನೇ ಭಾರತೀಶನೆ । ಅಲ್ಲಿ ವಿಷವ ಕುಡಿದೆಯೆಂದು ಭಾರತೀಶನ ॥ ಗೆಲ್ಲಿಸಿದೆಯೊ ಸರ್ವಸುರರ ಭಾರತೀಶನೆ । ಬಲ್ಲಿದನು ನಿನಗೆಣೆಯಾರೋ ಭಾರತೀಶನ ॥ ೧ ॥ ಅಂಜನಾ

ಕುಮಾರನಾಗಿ ಭಾರತೀಶನೆ । ಕಂಜನಾಭನಂಘ್ರಿಭಜಿಸಿ ಭಾರತೀಶನೆ ॥ ಅಂಜದುದಧಿ ದಾಟಿ ಪೋಗಿ ಭಾರತೀಶನೆ । ನಂಜಿ ಚರರ ಸಂಹರಿಸಿದಿಯೊ ಭಾರತೀಶನೆ ॥ ೨ ॥ ಕುಂತಿ ಜಠರದಿಂದ ಜನಿಸಿ ಭಾರತೀಶನೆ । ಹಂತ ಕೌರವ ರನ್ನು ತರಿದಿ ಭಾರತೀಶನ ॥ ಕಂತುಪಿತನ ಕರುಣ ಪಡೆದೆ ಭಾರತೀಶನೆ । ಅಂತಗಾಣೆ ನಿನ್ನ ಮಹಿಮೆಗೆ ಭಾರತೀಶನ ॥ ೩ ॥ ಯತಿಯರೂಪ ಇಳಿಯೊ ಳಾಗಿ ಭಾರತೀಶನೆ । ಮತಿಯ ಸರ್ವಬುಧರಿಗಿತ್ತ ಭಾರತೀಶನೆ ॥ ಸತತ ನಿನ್ನ ಪೂಜಿಪರಿಗೆ ಭಾರತೀಶನೆ । ಗತಿಯ ಕೊಡುವೆ ದೋಷ ಕಳೆದು ಭಾರತೀ ಶನೆ ॥ ೪ ॥ ಘನ್ನ ಪ್ರಾಣೇಶವಿಠಲನಾಳೆ ಭಾರತೀಶನೆ । ಬನ್ನಪವನು ಲಾಲಿ ಸುವದೋ ಭಾರತೀಶನೆ ॥ ನಿನ್ನ ದಾಸನೆನಿಸಬೇಕೋ ಭಾರತೀಶನೆ । ಅನ್ಯ ವಿಷಯವೊಂದಸೊಲ್ಲೆ ಭಾರತೀಶನೆ ॥ ೫ ॥

೪೬. ರಾಗ-ಸಾರಂಗ (ಅಟತಾಳ).

ನಮಿಸೋ ಗಂಧವಹಗೆ ಪ್ರತಿದಿನ,-ನಿನ್ನ-ಶ್ರಮವ ಕಳೆದು ಅಭೀ ಷ್ಟಿಯ ಕೊಡುವ ಮನುಜ ॥ ನಮಿಸೋ ॥ ಪ ॥ ಹರಿ ಕರುಣಿಸದಿರೆ, ಗುರು ಕರುಣಿಸುವನು । ಗುರು ಕರುಣಿಸದಿರ, ಹರಿ ಜರೆವ ॥ ಧರೆಯೊಳು ವಾತ ಪ್ರಸಾದ ಸಂಪಾದಿಸಿ, ಶ್ರೀವಲ್ಲಭಗೆ ಬೇಕಾದವರ ಕೇಳು, ಮನುಜ ॥ ೧ ॥ ಹನುಮನೊಲಿದನಂದು ಒಲಿದ ಸುಗ್ರೀವಗೆ । ಮನಸಿಜಪಿತನು ತನ್ನಯ ಚರಣ । ಘನವಾಯುಸುತ ಭಜಿಸಿದರಿನ್ನ ಪಗೆ ಪ್ರಭಂಜನನೊಲಿಯದಕ ಕೊಂದನು ಕೇಳಲೂ ॥ ಮನುಜ ॥ ೨ ॥ ದುರ್ಜನಾಂತಕಗೆ ಬೇಕಾದ ಕಾರಣದಿಂದ ಅರ್ಜುನಾದಿಗಳು ಸುಖಪಟ್ಟರು ॥ ಅಬ್ಜಾಪ್ತಸುತ ಅಸಮರ್ಥನೆ ರಣದೊಳು ನಿರ್ಜಿತನಾಗಲು ತಿಳಕೊಯಿದು ಮನುಜಾ ॥ ೩ ॥ ಸುರರೆಲ್ಲ ಕೂಡಿ ನ್ಯಾಯವ ಮಾಡಿ ನೋಡಲು ಸರಿಯಾಗಲಿಲ್ಲವು ಮಾರುತಗೆ । ಗರಳವುದ್ಭವಿಸಲು ಮಥನ ಕಾಲದಿ ಆದಿತ್ಯರ ಮೊರಕೇಳಿ ಪ್ರಾಶನಮಾಡಿದ, ಮನುಜ ॥ ೪ ॥ ಶಮೆ ಯಲ್ಲಿ ದಮೆಯಲ್ಲಿ ಸರ್ವಗುಣದಲ್ಲಿ । ಪವಮಾನಗೆ ಸರಿಯುಂಟಾವನು ಜಗದಿ ॥ ಅಮಲ ಪ್ರಾಣೇಶವಿಠಲಗಲ್ಲದವನು ಯಮಸದನಕೆ ಯೋಗ್ಯ ಯಮಗ ಲ್ಲೆಂಬ ಮನುಜ ॥ ೫ ॥

೪೭. ರಾಗ–ನಾಟಿ (ಝಂಪೆತಾಳ).

ಶ್ರೀಭಾರತೀಶ ನಮೋ ನಮೋ–ಬಿನ್ನಪವ ಕೇಳು ॥ ನಾಭಿನಂದನ ಚರಣ ಸರಸೀರುಹಭೃಂಗ ನಮೋ ನಮೋ ॥ ಪ ॥ ಸಂಕರ್ಷಣನ ತನಯ, ಜಡಜಂಗಮದಿ ವ್ಯಾಪ್ತ । ಶಂಕರಾದಿ ಸಮಸ್ತ ಸುರವಂದಿತ । ಕಿಂಕರರ ಪನೋನಾನು, ದಯದಿ ಕರಪಿಡಿದು, ಭವಪಂಕದೊಳಗಿಪನ ಕಡೆತೆಗೆಯೊ ಭಯಕಳಿಯೊ ॥ ೧ ॥ ನೀನಲ್ಲದಾರ ಸಲಹುವರ ಕಾಣೆನೋ ಜೀಯ । ಭಾನುನಂದನರಕ್ಷ ದುರುಳಶೀಕ್ಷ । ಹೀನಮತಗಳ ನೋಲಿಸಿದ ದಕ್ಷ ಸುರಪಕ್ಷ । ದೀನಜನಮಂದಾರ ಪವನಸುಕುಮಾರಾ ॥ ಶ್ರೀಭಾರತೀಶ ॥ ೨ ॥ ಪ್ರಾಣೇಶವಿಠಲನಿಚ್ಛಾನುಸಾರ ಧರೆಯೊಳು, ನೀನವತರಿಸಿ ಜಾತಿಧರ್ಮ ವನ್ನು । ಜ್ಞಾನಿಗಳ ಸಮ್ಮತಾಹಂತೆ ಆಚರಿಸಿದೆಯೊ, ಮಾನಿಮೋಕ್ಷದನ ಆರೊಂದು ಸುರವಂದ್ಯ ॥ ೩ ॥

೪೮. ರಾಗ–ನಾಟಿ (ಝಂಪೆತಾಳ).

ನಮೋನಮೋ ಶ್ರೀಭೀಮ ನಮೋನಮೋ ಜಿತಕಾಮ । ಕಮಲಾಕ್ಷ ದಾಸ, ಪೊರೆ ಯುಬ್ಧಾಪ್ತ ಭಾಸ ॥ ಪ ॥ ಘನಗಿರಿಯೊಳಗೆ ಕುಂತಿ ಸಿನ್ನೆತ್ತಿ ಕೊಂಡಿರಲು । ಧ್ವನಿಮಾಡೆ ಪುಲಿ ತಾಯಿ ಸಪುಗಿ ಬಿಸುಟೀ ॥ ತನುವು ನಿನ್ನದು ನೋಂಕೆ, ನಗವೊಡೆದು ಶತಶೃಂಗನೆನಿಸಿಕೊಂಡಿತೋ ದ್ವಾಪರದಿ ಬಲವಂತ ॥ ೧ ॥ ಲೋಕದೊಳು ಮನುಜರಾ ಶಿಶುಗಳಂದದಿ ಬೆಳದು, ಪಾಕ ಶಾಸನಿಯಮಜಯಮರಜನನೀಯಾ ಕೂಡಿಕೊಂಡು, ಇಭಪುರಿಗೈದಿ ಮೋದ ದಲಿ । ಸಾಕಿಸಿಕೊಂಡೆ ಯಂಬಿಕಿಯಮಗನಿಂದಾ ॥ ೨ ॥ ಚಿಕ್ಕವರೊದನೆ ಚಂಡು ಬುಗರಿ ಈಸಿಕಿ ಓಟ ತೆಕ್ಕಮುಷ್ಟಿ ಮರಗಳನೇರುವಲ್ಲಿ । ನೂಕ್ಕಿದವನಿವನೆಂದು ಆವಾಗಲೆಲ್ಲರಿಗೆ ಬಿಕ್ಕಿ ಬಾಯ್ದುರೆವಂತೆ ಮಾಡಿ ತೋರಿಸಿದೆ ॥ ೩ ॥ ಅಹಿತ ರಾದವರು ನೀರೊಳಗೆ ಕೆಡಹಲು ಎದ್ದೆ । ಅಹಿಗಳಿಂ ಕಚ್ಚಿಸಲು ನೋಯ ದಿದ್ದೆ ॥ ಸಹಿಸದಲೇ ವಿಷ ಹಾಕಿ ಬದುಕಲ್ಕೆ ಹೊರಘಾಕ ॥ ಮಹಮೋಸ ಮಾಡೆಗೆದ್ದು ಧರಿಯೊಳು ಮೆರೆದೆ ॥ ೪ ॥ ಸೋಕಿಯಸುರಿಯ ಮಗನ ಪಡೆದು ಖಲನನು ತರಿದು । ಏಕಚಕ್ರನಗರದಲ್ಲಿದ್ದು ॥ ಬೇಕಂದು ನೀನಾಗಿ ಪೋಗಿ ಬಕನನು ಕೊಂದೆ । ಈ ಕುಂಭಿಣೀಯೊಳು ನಿನಗಿವಿರಾರು ದೇವಾ

|| ೫ || ಪಾಂಚಾಲಿಯನು ಗಳಿಸೆ ಕೋಪದಿಂ ಬಂದಹರಿ | ವಂಚಕರ ದರ್ಪವ
ಭಂಗಿಸಿ ಲೀಲೆಯಿಂ || ಮಿಂಚುವಾ ಗದೆಲಿಹೆ ನಿಶ್ಚಿಂತ ಬಲವಂತ,
ಮುಂಚಿನಜ ಪ್ರಣತಸುರಭೂಜ ರವಿತೇಜ || ೬ || ಈ ಪರಿಯಿಂದ ಕೆಲಕಾಲ
ವಲ್ಲೆಲ್ಲ ಕಾಪಾಡಿ ವಜ್ರಿಪ್ರಸ್ಥಕೈತಂದು | ಪಾಪಿ ಜರಿಜನ ಕೊಂದು
ರಾಜಸೂಯುವ ಮಾಡಿ | ನೀಂ ಪಾಲಿಸಿದೆಯವನಿ ಸದ್ಧರ್ಮದಿಂದ || ೭ ||
ದ್ಯೂತವಾಡಿದ ಸಮಯದಲ್ಲಿ ದ್ರೌಪದಿಯುಳನು | ಪಾತಕಿ ವಸನೆಳೆಯೆ ಕೋಪ
ದಿಂದ || ಘಾತಿಸುವೆನೆಂದಬ್ಬರಿಸಿ ಪಲ್ಗಡಿದು ಲಕ್ಷ್ಮೀನಾಥನಿಚ್ಛೆಂಗೆ ಈಗೆಂದು
ಕೈಮುರದೇ || ೮ || ತಪೋಯೋಗ್ಯನಾ ಪಾಪಪೂರ್ಣವಾಹದಕ ಬಹು ಮಿತಿ
ಯಿಂದ, ವನವಾಸ ಪತ್ಕರಿಸಿದೆ || ಸಮರಾಂಗಣದೊಳವರ ಹೀಗೆ ಸವರುವೆ
ನೆಂದು ಸುಮನಸಾರಾಧ್ಯ ಬಾಹುಗಳೆತ್ತಿ ನಡೆದೆ || ನಮೋ ನಮೋ || ೯ ||
ಕಾನನದಿ ಕಿಮ್ಮೀರನಂ ಕೊಂದು ಮುಷ್ಟಿಯಿಂದ ಮಾನವಂ ಕೈಕೊಂಡು ಮತ್ತೆ
ಮುಂದೆ || ಆ ನಗವಿ ಬಹುಕಾಲ ತೇರಿಕೊಂಡಿದ್ದಂಥ | ದಾನವರ ಮಡುಹಿ
ಸೌಗಂಧಿಕವ ತಂದೆ || ೧೦ || ನಿನ್ನೊಳಗೆ ನೀಂ ಲೀಲೆ ಮಾಡಿದ್ಯಾ ಸಮಯದಲಿ |
ಚಿನ್ನದೋಪನು ಪುಷ್ಪವೊಂದು ಬೀಳೆ | ನಿನ್ನರಸಿಯಿದು ಯನಗೆ ಯಿಷ್ಟವೆನಲ
ವಳ ನುಡಿ ಮನ್ನಿಸುತ ಪೋಗಿ ಮಣಿಮಂತನೊಂಚಿಸಿದೆ || ೧೧ || ದ್ವೈತವನ
ದೊಳು ಬಂದು ಮೃಗಬೇಟೆಯಾಡೆ, ಪುರುಹೂತಪದವಾಳ್ದವನು ಮೆಯ್ಯ
ಸುತ್ತಲ್ | ನೀ ತವಕಬೀಳದೆ ಅವನ ಪುನೀತನ ಮಾಡಿ | ಖ್ಯಾತಿ ತಂದಿತ್ತೆ
ಯಂತಕನಸುತಗಂದು || ೧೨ || ಮತ್ಸ್ಯದೇಶಾಧಿಪನ ಮನೆಯಲ್ಲಿಯಿದ್ದಾಗ
ಹೆಚ್ಚಿನಾಬಲದ ಮಲ್ಲನ ಕಡಹಿದೆ || ಅಚ್ಚಪಾಪಾತ್ಮ ಕೀಚಕನನ್ವಯ
ತರಿದೆ | ಅಚ್ಯುತನ ನಿಜದಾಸ ಭಕ್ತರಘನಾಶ || ೧೩ || ಎಂಟೈದು
ವರುಷ ಈ ರಿತಿಯಲಿ ಕಳೆದು ವೈಕುಂಠಪತಿ ದಯದಿಂದ ಉಪಪ್ಲಾವ್ಯದಿ ||
ಗಂಟುಹಾಕಿದಿದುರಾತ್ಮನಕೂಡ ಸಂಗರಕೆ | ಕಂಠೀರವರವದಿಂ ತಲೆದೂಗಿ
ನಡೆದೆ || ೧೪ || ಮುತ್ತೆ ಭೀಷ್ಮಗೆ ಪಂದ ಸ್ವಲ್ಪ ಮಾತ್ರಕೆ ಮಾನ-ಪಿತ್ತಂತೆ
ತೋರಿಯೆಲ್ಲರ ರಥವನೂ || ಕತ್ತರಿಸಿ ಹಿಂದಕ್ಕೋಡಿಸಿದೆ ನಿನ್ನಾರ್ಭಟಕೆ
ಹತ್ತು ದಿಕ್ಕಿನೊಳೊಬ್ಬರಿದಿರಾಗಲಿಲ್ಲ || ೧೫ || ಪ್ರಹ್ಲಾದನವತಾರ ಬಾಹ್ಲೀಕ
ನನು ಗೆದ್ದು | ಮಹೀಜಸುತನಾನಿ ಮಸ್ತಕ ಶೀಳಿದೆ || ಬಹು ಖೋದಿ ಧಾರ್ತ

ರಾಷ್ಟ್ರರ ಕೊಂದು ಹರೆಬಿಟ್ಟ ಅಹಿಯಂತೆ ರಣರಂಗದಲ್ಲಿ ಸಂಚರಿಸಿದೆ ॥ ೧೬ ॥ ಕಡುಕೋಪದಿಂದ ಹೂಂಕರಿಸಿಯುರಿಯುಗುಳುತಲಿ ಪೊಡವಿನಡುಗಿಸಿ, ನಭ ಬೇಯಿಸುತ್ತಲಿ ॥ ಪಿಡಿದುದುಶ್ಶಾಸನನ ತೊಡೆಯಲ್ಲಿ ನೆರೆಗೆಡಹಿ ಒಡಲ ಛೇದಿಸಿ ರಕ್ತಮಜ್ಜಸವಗೈದೆ ॥ ೧೭ ॥ ಕರುಳದಂಡೆಯಮಾಡಿ, ಅರಸಿ ಮಂಡೆಗೆ ಮುಡಿಸಿ ಖರೆಯಮಾಡಿದೆ ಉಭಯಕುರ ಶಪಥವ ॥ ಕರೆದೆ ಕುರು ಪಾಂಡವರ ಬಿಡಿಸಬನ್ನಿರೆಂದು ಮರುಳುಗೊಂಡರೆಲ್ಲ ನಿನ್ನ ರೂಪ ನೋಡು ತಲಿ ॥ ೧೮ ॥ ಸ್ವಾಮಿ ಪ್ರಾಣೇಶವಿಠಲನ ಆಜ್ಞೆಯ ವಹಿಸಿ । ಭೂಮಿಭಾರಿಳು ಹದಕೆ ಅವತರಿಸಿದೆ ॥ ನಾ ಮಾಡುವೆನೆ, ಪೂರ್ತಿ ನಿನ್ನ ಮಹಿಮೆಯ । ಸಮರ ಭೀಮ ಕರಪಿಡಿದು ಸಲಹುವದೋ ಪ್ರತಿದಿನದಿ ॥ ೧೯ ॥

೪೯. ರಾಗ–ವರಾಳಿ (ಅಟ್ಟತಾಳ)

ಅಂಜಿಕ್ಯಾತಕೇ–ಮನವೇ–ಅಂಜಿಕ್ಯಾತಕೆ ॥ ಪ ॥ ಕುಂಜಹರನ ಪಿತನಸಾದ ಕಂಜನಿರತ ಭಜಿಸುತಿರಲು ॥ ಅನು ॥ ಎರಡು ಒಂದು ಕೋಟಿ ರೂಪ । ಧರಿಸಿ ರಕ್ಕಸರೊಳು ಕಾದಿ । ಹರಿಯ ಕರುಣಗಳಿಸಿದವನ । ಚರಿತಗಳನು ಸ್ಮರಿಸುತಿರಲು ॥ ೧ ॥ ತಾಸಿಗೆಂಟು ಒಂದು ನೂರು ಶ್ವಾಸ ಜಪವ ಮಾಡಿ ಜಂತುರಾಶಿಗಳಿಗೆ ಸತತಬೇಟ ದಾನೆಪೂರ್ತಿಸುವವನಿರಲು ॥ ೨ ॥ ಜಂಗಮರಿಗೆ ವಾಣಿಚರಣ ಕಂಗಳುಕಿವಿಯಮಾಡಿನುತಲಿ । ಪಿಂಗಳ ನಿಭ ಭಾರ ತೀಶ ಹಿಂಗದನವರತ ಪೊರೆಯಲು ॥ ೩ ॥ ವರಿಹರಿಸುತಲಗ್ನಿಭಯುವ ತ್ವರದಿಹಿ ಡಿಂಬ, ಕೀಚಕಪ್ರಮುಖರನು ಕುರುಪತಿಯ ಕುಲವ ತರಿದ ಕುಂತೀಕುವರ ನಿರಲು ॥ ೪ ॥ ಭುಜಕೆ ಗೋಪೀಚಂದನವನು, ವಿಜಯಚಕ್ರಗಳನು ಧರಿಸಿ । ಕುಜನರಿಪು ಪ್ರಾಣೇಶವಿಠಲ ಭಜಕನ ದಯೆ ಪೂರ್ಣವಿರಲು ॥ ೫ ॥

೫೦. ರಾಗ- ವರಾಳಿ (ತ್ರಿಪುಟತಾಳ).

ಮಾರುತದೇವರ ಹೊಂದಿರೋ–ಮೂಜಗದ ಗುರು–ಮಾರುತದೇವರ ಹೊಂದಿರೋ ॥ ಪ ॥ ಮಾರುತ ದೇವರಹೊಂದಿದವರ ಪಾಪವುಪೋಗಿ । ಹರಿಮಂದಿರವನೈದುವದಕೆ ಸಂದೇಹವಿಲ್ಲ ॥ ಪ ॥ ದಶರಥಸುತನಂಗನೆಯ–

ಕದ್ದೊಯ್ದಿರಲಾಗಿ-ದಶಕವಾನರಸ್ತೋಮ । ರವಿಜನಾಜ್ಞಾ-ದೇಶದಿಂದೆಲ್ಲ ರಾಶೆ ಭಯದಲಡಗಿ, ರಕ್ಷಿಸೋ-ಶ್ವಶನಾ ಯೆನಲು ಪೋಗಿ ಶೀಘ್ರವಾರ್ತೆಯ ತಂದ ॥ ೧ ॥ ಕುರುಜನುವಟಳಕೆ ಪಾರ್ಥಾರಳಲಿ, ವನ ಚರಿಸಲು ತಪಕಾ ಬೀಳದೆ ಪ್ರಾಂತಕ್ಕ ॥ ದುರುಳರ ಸದೆದು ಭೂಭಾರವ ಕಳೆದು, ಸಹೋದ ರರ ಪ್ರೀತಿಪಡಿಸಿ ಕೃಷ್ಣನ ದಯೆ ಪಡೆದಾ ॥ ೨ ॥ ಗುಣಪೂರ್ಣ ಅನಘ ಶ್ರೀಪ್ರಾಣೇಶ ವಿಠಲನ ನಿರ್ಗುಣನೆಂದು ಅಸುರರು ದುರ್ಮತ ಸ್ಥಾಪಿಸೆ ॥ ಘನಶಾಸ್ತ್ರ ವಿರಚಿಸಿ ಐಕ್ಯವ ಬಿಡಿಸಿ ಸಜ್ಜನರ ಪೊರೆವ ಶ್ರೀಆನಂದಾ ಮುನಿಪರೆಂಬ ॥ ಮರುತ ॥ ೩ ॥

೫೧. ರಾಗ-ಕಲ್ಯಾಣಿ (ತ್ರಿಪುಡೆತಾಳ).

ಮುಖ್ಯಪ್ರಾಣನ ನಮ್ಮ ಮೂಲ ಗುರುವು । ರಕ್ಕಸಾಂತಕ ಶ್ರೀಭಾರ ತಿಯ ರಮಣನೆಂಬ ॥ ಮುಖ್ಯಪ್ರಾಣನೆ ॥ ಪ ॥ ಅಂಜನಾಸುತನಾಗಿ ದಶರಥಸುತನಂಘ್ರಿಕಂಜ ಭಜಿಸಿ ರಾವಣಾದಿ ಖಳರಾ । ಅಂಜಿಸಿ ಕಪಿ ಗಳು ಚೇತನ ಕಡಲಾಗ। ಸಂಜೀವನವ ತಂದು ಪ್ರಾಣವನುಳುಹಿದ ॥ ಮುಖ್ಯ ॥ ೧ ॥ ಹರಿಗೆ ದ್ವೇಷಿಗಳಾದ ಮಗಧಾದಿಕ್ಷಿತಿಪರ । ತರಿದು ದ್ರೌಪದಿಯಳ ಕರವ ಪಿಡಿದು ॥ ದುರುಳ ಕೌರವರನ್ನು ಅಳಿದು ದ್ವಾಪರಕೊಟ್ವಾ ಗರಳಭೋ ಜನ ಮಾಡಿ ವೃಕೋದರ ನೆನಿಸಿದಾ ॥ ಮುಖ್ಯ ॥ ೨ ॥ ವಿಷಯಂಗಳ ತೊರೆದು ಕಾಷಾಯಾಂಬರ ಧರಿಸಿ । ವಸುಧೆಯೊಳಗೆ ದುರ್ಮತವನೋಲಿಸಿ ॥ ಅಸಮ ಶ್ರೀ ಪ್ರಾಣೇಶವಿಟ್ಠಲ ಪರದೈವವೆಂದು ಹಸನಾಗಿತಿಳಿಸಿದ ಶ್ರೀಮಧ್ವಮುನಿ ಯೆಂಬ ॥ ಮುಖ್ಯ ॥ ೩ ॥

೫೨ ರಾಗ-ಕಾಂಬೋಧಿ (ಝಂಪೆತಾಳ).

ಶ್ರೀವಾಯುದೇವರಿಗೆ ನೀತವಾದ ಮೂವತ್ತೆರಡು ಸುಲಕ್ಷಣಗಳನು ವರ್ಣಿಸುವೆ ॥ ಪ ॥ ತಾಲು ಜಾನುಗಳು ಸ್ತನತುದಿಯು ನಾಶಿಕ ಚಕ್ಷು, ನಾಲಕ್ಕೊಂದು ದೀರ್ಘಜಂಘ, ಗ್ರೀವ । ಆಲಿಂಗ ಪೃಷ್ಠನಾಲ್ಕು ಹ್ರಸ್ವ ಕೇಶರದ ಮೇಲಾಪತ್ವಕು ಬೆರಳು ನಖ ಪಂಚಸೂಕ್ಷ್ಮ ॥ ೧ ॥ ಕಕ್ಷಿ ಕುಕ್ಷಿಯು,

ವಕ್ಷ, ಕರ್ಣ ನಖಸ್ಕಂದಾರು ರಕ್ಷಘ್ನನಿಗೆ ಶೋಭಿಪವು ಉನ್ನತ ॥ ಅಕ್ಷಿ ಚರಣ ಕರನಖ ಅಧರ, ಜಿಹ್ವೇಣು ಜಿಹ್ವೆ । ವೋಕ್ಷದನ ಈಯೇಳು ಅವಯುವವು ರಕ್ತ ॥ ೨ ॥ ಸತ್ವ ನಾಭಿಯು ಸ್ವರವು ಈ ಮೂರು ಗಂಭೀರ । ಉತ್ತಮುಲಲಾಟ ಉರ ದ್ವಯವಿಸ್ತಾರಾ ॥ ಸತ್ಯಸಂಕಲ್ಪ ಶ್ರೀಪ್ರಾಣೇಶ ವಿಠಲನ ಭೃತ್ಯೋತ್ತಮಗೆ ತಕ್ಕು ಏವಾರಿಗಿಲ್ಲ ॥ ೩ ॥

೫೩. ಭಾಮಿನಿಷಟ್ಪದಿ.

ತಿಂಗಳಿಗೆ ತಿಂಗಳಿಗೆ ಬರುತಿಹ । ಪಿಂಗಳರ ನಾಮುವನು ಬರೆವೆನು ಇಂಗಿತಜ್ಞರು ಕೇಳ್ವುದು ಉದಾಹರನವ ಮಾಡದಲೆ ॥ ಪ ॥ ಧಾತ ಚೈತ್ರಕೆ ಆರ್ಯಮಾಯೆಂಬಾತ ವೈಶಾಖಕೆ, ಸುಜೇಷ್ಟಕ । ಸಾಧನಸಿಸುವ ಮಿತ್ರ, ಆಷಾಢಕ್ಕೆ ಬಹವರುಣ ॥ ಖ್ಯಾತನಾಗಿಹ ಶ್ರಾವಣಕವುರುಹೂತ, ಭಾದ್ರಪದಕೆ ವಿವಸ್ವಾನ್, ಭೂಷಯುತನಾಗಿರುವ ತ್ವಷ್ಟಾಶ್ವಿನಮಾಸದಲಿ ॥ ೧ ॥ ಹರಿ ದಿನವ ಕಾರ್ತಿಕಮಾಸದಿ । ಇರುತಿಹನು ಮಾರ್ಗಶಿರದಿನಮಿತ್ರ । ವರದ ಭಗ ಪುಷ್ಯದಲಿ, ಪೂಷಾ ಮಾಘಮಾಸದಲಿ ॥ ಸುರನದಿಯೆ ಮೊದಲಾಗಿಹೆ ಐವರಿಗೆ ನಮುವರ್ಜನ್ಯ ಫಾಲ್ಗುಣ ಕರಿತು, ಇಂತು ಯಥಾವಿಧಿಯೊಳರ್ಘ್ಯ ವನು ಕೊಟ್ಟು ಜಪವ ॥ ೨ ॥ ಮಾಡುತಿಹ ಧನ್ಯರಿಗೆ ಪಾವಗಳೋಡಿ ಸುತದಯದಿಂದ ಯೋಸೇನ್-ಬೇಡಿದಿಷ್ಟವ ಕೊಟ್ಟು ಕರ್ಮಕೆ ಸಾಕ್ಷಿತಾನಾಗಿ॥ ಮಾಡುವನು ಸಂರಕ್ಷಣೆಯು, ಒಡನಾಡುವನು ಬಿಡಸೊಂದರೆ ಕ್ಷಣ । ಈಡು ಯಿಲ್ಲದ ಮಹಿಮ ಶ್ರೀ ಪ್ರಾಣೇಶವಿಠಲನು ॥ ೩ ॥

೫೪. ರಾಗ–ಸಾರಂಗ (ಏಕತಾಳ).

ರೋಚನ ಪೂರ್ವೇಂದ್ರಾ ಧೀರವರಾಕು । ಖೇಚರ ಸರ್ವಚೇಷ್ಟಕನೆ ವರಾಕು । ಯಾಚಕರಿಗೆ ಕಲ್ಪತರುವೆ ವರಾಕು । ಸುಚಾವಿಮಾಕರವರ್ಣ ದೇವವರಾಕೆಂದು । ಸೂಚಿಸಿಯಾರತಿಯು, ಬೆಳಗಿರೆ ॥ ಪ ॥ ಜಾನಕೀಪತಿ ದೂತ ವಾಯು ವರಾಕು । ದಾನವರಳಿದ ವಿಕ್ರಮನೆ ವರಾಕು ॥ ಜ್ಞಾನಿಗಳೊಡೆಯ ಕೇಸರಿಜ ವರಾಕು । ದೀನರಕ್ಷಕ ಹನುಮಂತ ವರಾಕೆಂದು ॥

ಮಾಣಿಕದಾರತಿಯ ಬೆಳಗಿರೆ ॥ ೧ ॥ ದ್ವಾಪರಾನುಗರಾರೀ ಭೀಮ ಪರಾಕು । ಪಾಪಿಜರಾಸಂಧನವೈರಿ ಪರಾಕು ॥ ಭೂವರ ಸೆರೆ ಬಿಡಿಸಿದನೆ ಪರಾಕು, ದ್ರೌಪದೀಪತಿವೃಕೋದರನೆ ಪರಾಕೆಂದು ॥ ದೀಪದಾರತಿಯ ಬೆಳಗಿರೆ ॥ ೨ ॥ ಗುರುಮಧ್ವಮುನಿರಾಯ ಆರ್ಯ ಪರಾಕು । ವರಗ್ರಂಥವಿರಚಿಸಿದವನೆ ಪರಾಕು । ಧರೆಯೊಳು ಬದರೀನಿವಾಸ ಪರಾಕು । ಸಿರಿಪ್ರಾಣೇಶವಿಠಲ ಪ್ರಿಯ ಪರಾಕೆಂದು ॥ ಹರದಿಯರಾರತಿಯ ಬೆಳಗಿರೆ ॥ ೩ ॥

## ೫೫. ರಾಗ–ಭೈರವಿ (ತ್ರಿಪುಡೆತಾಳ).

ಇಂದ್ರಸೇನನಾಥ ಹೋ, ತ್ರೈಲೋಕ್ಯ ವಿಖ್ಯಾತ ಹೋ ಸವ್ಯಸಾಚಿ ಪ್ರೀತ ಹೋ, ಮಧ್ಯಗೇಹಜಾತ ಹೋ ॥ ಇಂದ್ರಸೇನನಾಥ ಹೋ ॥ ಪ ॥ ತರಣಿಬಿಂಬಕೆ ಜಿಗಿದೆ, ಗದೆಯನು ಪಗೆದೆ ಅಸುರಗ ಕರವನು ಮುಗಿದೆ ॥ ಹರಿಗೆ ವಾರ್ತೆಯ ತಂದೆ, ಜರಿಜನ ಕೊಂದೆ, ನೀಂಬದರಿಯೊಳ್ನಿಂದೆ ॥ ಖಳ ಕುಲ–ತರಿದೆ ವಜ್ರಶರೀರ । ಧರಣಿಯಭಾರ–ಇಳುಹಿದುದಾರ–ಮತಿ । ಕಪಿನರನೊಳತಿಕೃಪೆಮಾಡಿದೆ, ದಾನವಬೇಡಿದೆ, ಸುಮತಿಯ ನೀಡಿದೆ ॥ ೧ ॥ ದಂಡ ಮೇಖಲಧಾರ-ಕುಜನಕುಠಾರ, ಬ್ರಹ್ಮಶರೀರ, ಜೈಸಿದೆ ಮಂಡೋದರೀ ವಲ್ಲಭನ, ಚರಿಸಿದೆಯೋ ವನ । ತಂದೆ ಮಾಧವನ, ಉಡಿಪಿಲಿ, ಚಂಡ ವಿಕ್ರಮ ರಾಮಸೇವಕಭೀಮ, ಸದಾಚಾರಧಾಮ, ಯತಿ ಮೋಷಾಂಡನ ಮೋರ ಕೇಳ್ದ, ಕೀಚಕನನು ಶೀಳ್ದೆ । ದ್ವಿಜಕುಲವಾಳ್ದೆ ॥ ಇಂದ್ರ ॥ ೨ ॥ ಲಕುಮಿಗುಂಗುರವ ಕೊಟ್ಟ । ರಣಕತಿ ಗಟ್ಟ, ಶಾರಿಯನುಟ್ಟ ॥ ಶರಧಿಯ ತವಕದಿ ಕ್ಷಣದೊಳುಹಾರಿದ. ಉಗ್ರವ ತೋರಿದೆ ಜ್ಞಾನವಬೀರಿದೆ ॥ ಲಂಕೆಯ ಸಕಲಸೌಖ್ಯವ ಕಡಿಸಿ, ಪುಷ್ಪವನುಡಿಸಿ, ಐಕ್ಯವಬಿಡಿಸಿ, ಪಟುವಪು ಮುಕುತಿ ಪತಿ ಪ್ರಾಣೇಶವಿಠಲನ ದಾಸ ಸಲಹೊ ಸಿದ್ಧೋರ್ವಷ ॥ ೩ ॥

## ೫೬. ರಾಗ–ದ್ವಿಜಾವಂತಿ (ಏಕತಾಳ).

ಸಲಹೋ ಜಡಚೇತನನಿಲಯ ಶ್ರೀಹನುಮಂತ । ಕಲುಷವಿದೂರ ಶಾಂತ ॥ ಪ ॥ ಕುಲಿಶಬಾಧೆಗೆ ನೀನೇಗತಿಯೆಂದು ಮರೆಹೊಕ್ಕ । ಕುಲಜ

ಪಾಲಕ ಹರಿಕುಲಜ ದಯಾಂಬುಧೇ ॥ ಪಲ್ಲ ॥ ಕಂಜ ಚರಣ ಗದಾ ಕಂಜಧರನಪಾದ ಕಂಜಮಧುಪ, ಮುನಿಪ ॥ ಕಂಜವದನ ನಭ ಕಂಜ, ಸುರಪ ರವಿ ಕಂಜವಿನುತ ವಿಜಿತ ॥ ಕಂಜಕೇತನ ಕಂಜಪಕ್ಷ ಖಳಸೂದನ ಕಂಜನಾಶನ ಭಾವೀಕಂಜ ದಯಾಂಬುಧೇ ॥ ೧ ॥ ಕಾಲಸೇಮೀಹ ನಿಚ್ಛೆ ಹೀಗೆಂದು ತಿಳಿದು ಆ ಕಾಲಜನನುಸರಿಸಿ ॥ ಕಾಲಕಳೆದು ವಿಪಿನಾ ಜ್ಞಾತವಾಸದಿ ಕಾಲಾರಿ ಪಾಲಿಸಿದೆ ॥ ಕಾಲುಪಿಡಿದವನ ಶಾಪಕಳೆದೆ, ಆವ ಕಾಲಕು ನೀನೇಗತಿ ಜಗಕ ದಯಾಂಬುಧೆ ॥ ೨ ॥ ಪ್ರಾಣಾಪಾನವ್ಯಾ ನೋದಾನ ಸಮಾನ ಹೇ ಜಗತ್ಪ್ರಾಣ ಸಮೀರ ಜ್ಞಾನ । ಪ್ರಾಣಾಧಿಪೂರ್ಣಾಧಿ ಪ್ರಾಣ, ನಂದನ ತಿರಸ್ಕೃತ, ಪಾಂಚಾಲಸುತಾ ॥ ಪ್ರಾಣದೊಡೆಯ ನೀನೊಲಿ ಯುದೆ ಎಂದಿಗೂ ಪ್ರಾಣೇಶವಿಠಲನ ಕಾಣೆ ದಯಾಂಬುಧೆ ॥ ೩ ॥

## ೫೭ ರಾಗ–ತೋಡಿ (ಏಕತಾಳ).

ಭಾರತೀರಮಣಾ–ಪವಮಾನಾ–ಜಗದೊಳು ಸುತ್ರಾಣ । ಘೋರ ದುರಿತಾರಣ್ಯದಹನ । ಮಾರಕದನ ಜಿತ, ವಾರವಾರಕೆ ಶ್ರೀನಾರಾಯಣನ ಪದ ಆರಾಧನೆಕೊಡು ॥ ಭಾರತೀ ॥ ಪ ॥ ಪ್ಯೆಗಣ್ಣಪದವಾಳ್ದ ವಾತ । ಲೋಕವಿಖ್ಯಾತ । ನಾಗಜನಕ, ಭಜಕಪ್ರೀತ ॥ ಯೋಗೇಶ ಜಡಜಂಗಮ ವಿತತ । ಅದ್ಭುತ ಚರಿತ, ಬಾಗುವೆ ಲಾಲಿನೋಮಾತಾ ॥ ಹೋಗುತಲಿದ ಹೊತ್ತೀಗಲ ತವಕದಲಿ ಭಾಗವತರೊಳಗೆ–। ಭಾಗೀರಥೀ ಪಿತನಾಗುಣ ಪೊಗ ಳಿಸೊ– । ಜಾಗುಮಾಡದಲೆ, ನಾಗಾದಿರೂಪನೆ ಗರುಡಾರ್ಚಿತ ॥ ೧ ॥ ಗೀರ್ವಾಣವಂದ್ಯ ಹರಿದಶ್ವ । ತೇಜ, ವೃಷದಶ್ವ । ದೂರ್ವಾಸಾರ್ಚಿತ ಮಾತ ರಿಶ್ವ । ಪಾರ್ವತೀಪತಿವಂದ್ಯ ದುಸ್ವಭಾವಗತನಭಸ್ವ – ತ್ಪೂರ್ವಿಕಾದೇವ ಹಂಸಾಶ್ವ, ॥ ತೋರ್ವುದುಜ್ಞಾನವ ಬೀರ್ವುದುಕರುಣವ, ಪೂರ್ವದೇವ । ದೂಷಣ ಸಾರ್ವನಿನ್ನನು, ಯನ್ನಚಾರ್ವಾಕಮತಿಯನು ಬೇರೊರೆಶಳಿಯಳು ಊರ್ವಿಯೊಳಗ ಮತ್ತೋರ್ವರ ಕಾಣೇ ॥ ಭಾರತೀ ರಮಣ ॥ ೨॥ ತ್ರಿಗುಣ ವರ್ಜಿತ ಪ್ರಾಣೇಶ । ವಿಠಲನದಾಸಾ ನಗಪಾಲಾ । ಕೊಡುಯನಗೆ ಲೇಸ–ಅಗ ಣಿತ ಮಹಿಮನೆ ಕಾಷಾಯವಸನ ಭೂಷ । ನಿಗಮವೇದ್ಯನೆ ನಿರ್ದೋಷ ॥

ನಗಸ್ತೋಮಗಳಿಗೆ ಪಗೆಯಾಗಿರ್ಪನ ಮಗನ ಧ್ವಜದಿಸಿಂದಿಗಡ, ಕುರು ಜರೆದೆ ಭುಗಿಲೆಂಬುವತೆರ ಮೃಗಧ್ವನಿಮಾಡಿದನಘ, ಪೊರೆವುದು ಕರಮುಗಿವೆ ಚರಣಕೆ ॥ ೩ ॥

೫೮. ರಾಗ–ಆರಭಿ (ಏಕತಾಳ).

ಹೇ ದಯಾಬ್ಧೇ ಪಾಲಿಸೆನ್ನನು । ಶ್ರೀದ ಹನುಮಂತ ॥ ಪ ॥ ಭೂಧವ ಜನದಿಯಲ್ಲಿ ನಿಂತಾ ಕಾಳೀಕಾಂತ–ವೀತಚಿಂತಾ ॥ ಪಲ್ಲ ॥ ರಾವಣಾನುಜ ನಂತೆ ಮತ್ತಾ ಶೈಲಸುತನಂತೆ ದೇವತಗಳೀಶನಂತೆ ದೇವತೆಗಳಂತ ॥ ಆವ ವಿಕ್ರಮಪಾರ್ಥನಂತೆ ಕಾದಿಬಿದ್ದಾ ಕಪಿಕುಲದಂತೆ ತಾವರೆಯ ಸಖಸೂರ್ಯ ನಂತೆ, ತತ್ಸುತ ಸುಗ್ರೀವನಂತೆ ॥ ೧ ॥ ಭೂವರಾಧಿಪ ಧರ್ಮನಂತೆ, ದ್ರೌಪದಿ ಯಂತೆ । ಭೂವಿಬುಧಸುತನಂತೆ ರಾಕ್ಷಸಿಯಂತೆ ಫಣಿಯಂತೆ ಆ ವಿರಾಟ ರಾಯನಂತ, ಪಾರ್ವತಿಯನಾಥನಂತೆ ನೀ ವಿಜಯನಾಗಲು ಸಹಿಸದಲೆ ಕೋಪಿಸಿದ ಧೃತರಾಷ್ಟ್ರನಂತೇ ॥ ೨ ॥ ಮೋದದಿಂದ ನಿನ್ನ ಪಡೆದಾ ಮಧ್ವಗೃಹನಂತೆ, ಆದರದಿ ಹರಿಪೂಜೆಮಾಳ್ಪ ಸೂರಿಜನರಂತ ॥ ಆದಿನ ಕಡಲಲ್ಲಿ ಮುಳುಗಿ ಪೋಗುತ್ತಿದ್ದಾ ನಾವೆಯಂತ, ಪಾದಪಿಡಿದಾ ಕಾಳೀ ಸರ್ಪನ ಕಾಯ್ದ ಪ್ರಾಣೇಶವಿಠ್ಠಲನಂತೆ ॥ ೩ ॥

೫೯. ರಾಗ–ನಾಟ (ಝಂಪೆತಾಳ).

ಗುರುವೆ, ಭಾರತಿನಾಥ । ಶರಣು, ಲಾಲಿಸೋಮಾತ । ಹರಿಪದಾರ್ಚನೆ ಕೊಟ್ಟು ಪೊರೆಯೋ, ದಯೆಯಿಟ್ಟು ॥ ಪ ॥ ರಾಮಸೇವಕನಾಗಿ ವಾನರ ಕಟಕಸೆರಹಿ । ನೀಂ ಮುದದಿ ಲವಣಾಬ್ಧಿ ದಾಟಪೋಗಿ ॥ ಭೂಮಿ ತನುಜೆಳಿಗೆ ವಾರ್ತೆಯನೆ ಪೇಳಿ, ರಾಗಟಯ–ಸ್ವಾಮಿಗರ್ಪಿಸಿದ ಬಲವಂತ ಹನುಮಂತ ॥ ೧ ॥ ರಾಜಸೂಯವ ಮಾಡುವದಕ ಮಾಗಧನ ಕೊಂದೆ । ಪೂಜಿಸಿದೆ ಕುರುಪತಿಯ ಸಂತತಿಯನು ॥ ಸೋಜಿಗವು ನಿನ್ನಲೀಲೆಯು ಆಯುಜಾತ ಬಿಡೌಜರಕ್ಷಕ ದ್ರೌಪದೀಶ ಬಲವಂತ ॥ ೨ ॥ ಬುಧಮಧ್ಯಗೇ ಹನಲಿ ಅವತರಿಸಿ, ಕುಮತಗಳ ಬೆದರಿಸಿ, ತ್ರಿದಶಸಪ್ತಗ್ರಂಥಮಾಡಿ ॥

ಸುದಯದಿಂದುತ್ತಮರಿಗಿತ್ತು ಮತವನು ನಿಲಿಸಿ, ಬದರಿಯೋಳ್ ಪ್ರಾಣೇಶ ವಿಠಲನಲ್ಲಿರುವೆ ॥ ಗುರುವೆ ॥ ೩ ॥

೬೦. ರಾಗ–ಶಂಕರಾಭರಣ (ಅಟತಾಳ).

ಪವಮಾನರಾಯಾ–ಪಾವನಕಾಯಾ–ಕಾಯೋ–ದಿವಿಷತ್ಪೂಜಿತ ಕವಿ ಜನಗೇಯ ॥ ಪ ॥ ಭಕ್ತವತ್ಸಲದೇವ–ರವಿತೇಜ–ಸರ್ವೋರ್ದ್ರಕ್ತ ಪ್ರಣತ ಜನ ಸುರಭೂಜ ॥ ಶಕ್ರಲೋಕೈಕ ಅನಂತಜ । ಭುಕ್ತಿ ಮುಕ್ತಿದ ದಿತಿ ಜಾಹಿ ದ್ವಿಜರಾಜ ॥ ೧ ॥ ದುರಿತಾಂಬುಧಘಾಗಜ (?) ಕಾಳೀಶ । ಸರ್ವ–ಸುರವಂದ್ಯ ಪದಕಂಜ ನಿರ್ದೋಷಾ ॥ ಪುರರಿಪುಪಿತ, ಪಯೋಧರ ಭಾಸ । ಸಾರೆಗರೆದು ಪೂರ್ತಿ ನೊಯನ್ನ ಅಭಿಲಾಷಾ ॥ ೨ ॥ ಪೌಲಸ್ತ್ಯಾನುಜ ಮಾರ ರಜರಕ್ಷ ಶ್ರೀಗೋಪಾಲನವನ ನೀಸುವದುಪೇಕ್ಷ ॥ ನೀಲೇಶತಮಾಡದೆ ತಾರಕ್ಷ ವಂದ್ಯ–ಕಾಲಿಗೆರಗುವೆ ದುರ್ಜನಶಿಕ್ಷ ॥ ೩ ॥ ಮಧುಸಖ ಪಾಲಾನುಜ ಪಾದಾರ–ವಿಂದ ಮಧುಕರದಂಡ ಮೇಖಲ–ಧಾರ ॥ ವಿದುರಾಗ್ರಜ ನಂದನ ಸಂಸಾರಾರ । ರಣ್ಯ । ಸುಧನಂಜಯ ವೃಕೋದರ ಸಮಾರ ॥ ೪ ॥ ಕುಟಿಲ ರಹಿತ, ಋಜುಗಣಾಧೀಶ । ಶ್ರೀಧೂರ್ಜಟಿ ವಂದ್ಯ, ಭಕ್ತಿಯಿಂಪ್ರಾಣೇಶ । ವಿಠಲನ್ನ ಭಜಿಸುತ್ತ ಸದ್ಭಾಷ್ಯ । ವನ್ನು ವರಸಮಾಡಿನೂ ದಯದಿಂದ ನಿಶಾ ॥ ೫ ॥

೬೧ ರಾಗ–ಶಂಕರಾಭರಣ (ಅಟತಾಳ).

ವೃಷವಕ್ಷ ಪಾಲಿಪುದೆನ್ನ–ಈ ದು–ರ್ವಿಷಯ ತ್ಯಜಿಸಿ ಶ್ರೀಕೃಷ್ಣನ್ನ । ಅಸಮುಪಾದಾಬ್ಜ ಭಜಿಸುವಂತೆ ಪ್ರತಿದಿನ, ಹಸನಾದ ಜ್ಞಾನಪ್ರೇರಿಸೂ ಭಕ್ತ ಸುರತರು ॥ ಪ ॥ ವರಿಸರ, ಕೃಷ್ಣೇಶ, ಗಂಧ–ವಹ, ಸಿರಿವಲ್ಲಭಪದಾರವಿಂದ । ಭೃಂಗ, ಪುರುಹೂತಮುಖ ಸುರವೃಂದ–ವಂದ್ಯ । ಗಿರಿಜಾಪಾಲಕ ಶತಾನಂದ ॥ ಆಹಾ ॥ ಎರಡುಹತ್ತೊಂದುಸಾಪಿರದಾರುನೂರ್ಜಪಸರುವ ಜೀವರೊಳಗೆ–ಇರಳೂ ಹಗಲೂ ಮಾಳ್ಪ ॥ ೧ ॥ ನಾಗಾದಿ ದಶರೂಪಧರ–ತಲೆ–ಬಾಗುವೆ ನಿನಗೆ ಉದಾರ । ವಿಕ್ರ–ಮಾಘಕಾನನ ವೈಶ್ವಾನರ, ಹೇಸದಾಗತಿ ಕುಜನ ಕುಠಾರ ॥ ಆಹಾ ॥ ಮಾಗಧರಿಪು, ಹೊತ್ತುಹೋಗುತಲಿದೆಈಗ ಭಾಗ ವತರಸಂಗ ಜಾಗುಮಾಡದಲೀಯೋ ॥ ವೃಷ ॥ ೨ ॥ ದೀನವತ್ಸಲ

ಶ್ರೀಮಾರುತ-ಯಾತುಧಾನಸಂಹರನೆ, ಹೇ ಮಾತರಿಶ್ವ-ಪ್ರಾಣೇಶವಿಠಲನ ದೂತ । ಚತುರಾನನಪದಯೋಗ್ಯ ವಾತ ॥ ಅಹಾ ॥ ಕ್ಷೋಣಿಯೊಳೆನ್ನಂಥ ಹೀನರಿಲ್ಲವೊ ಪಾಪ-ಕ್ಷೀಣಿಸಿ ಸಲಹೋ ಸುಶೇಣಾದಿಸೂದನ ॥ ೩ ॥

೬೨. ರಾಗ-ಭೈರವಿ (ಅಟತಾಳ).

ನೀನಲ್ಲ ದನ್ಯರೆ ಸಲಹಲು-ಕಾಯೋ-ಜಾನಕೀಪತಿದೂತ ಹನುಮಂತ ॥ ಪ ॥ ಗುರುವೆ ನಿನ್ನಯ ಪಾದ ಭಜಿಸುವರನ್ನ । ಧರೆಯೊಳು ಬನ್ನಪಡಿಸುವೋರೆ ॥ ಗಿರಿಸುತ ನೀ ಗತಿಯೆನಲಾಗ, ಬೇಗ-ವೊರೆದೆಯಾತನ ಜಲಧಿಯೊಳಿಟ್ಟು ॥ ೧ ॥ ರವಿಜ ಶಕ್ರಜನಿಂದ ಬಳಲುತ ಬಂದು ಪವನ, ಪಾಲಿಪುದೆನ್ನಲಾಕ್ಷಣ ॥ ಭುವನೇಶನಿಂದ ವಾಲಿ ಕೊಲ್ಲಿಸಿ, ಕಾಳೀ । ಧವ ಸುಗ್ರೀವನ ಭಯಬಿಡಿಸಿದೆ ॥ ೨ ॥ ತಂದೆ ಪ್ರಾಣೇಶವಿಟ್ಠಲಸಿರಿ-ನಿನಗಂದುಂಟಂದಿಲ್ಲೇ ಈ ಮಹಿಮೆಯು ॥ ಬಂದ ದುರಿತ ನಿವಾರಣಮಾಡಿ-ದಯದಿಂದ ಪಾಲಿಸೋ ನಿನ್ನ ದಾಸರ ॥ ೩ ॥

೬೩. ರಾಗ-ವರಾಳಿ (ಅಟತಾಳ)

ದೂರ ನೋಡುವುದುಚಿತವಲ್ಲವೋ-ವಾರವಾರಕೆ ಬಿಡದೆ ತುತಿಪೆ । ಮೀರಿದವನ ನಾ ನಿನಗೆ ಪವನ ॥ ಪ ॥ ರಾಮಚಂದ್ರನ ಸೇವೆಯ ನಿಷ್ಠಾನದಿಂದ ಮಾಡಿ ಬಹಳ ತಾಮಸಜನಂಗಳ ತರಿದೆ ನೀಂ ಮಹಾಸಮರ್ಥನೆಂದೇ ॥ ಮನೆ, ಯಿಲ್ಲದವನು ಎಂದೆನೆ । ಕೋತಿ ರೂಪ । ಈ ಮುಖಾವು-ಹೀಗೆ ಅಂದಿನ । ನಗವಪೊತ್ತಿ ಭೂಮಿಯೊಳಗೆ ಕರಿಣನೆಂದೆನೆ ॥ ಹನುಮನೆ ॥ ದೂರ ॥ ೧ ॥ ಪೊಕ್ಕು ರಣಕ ಹೆಜ್ಜೆಯ ಹಿಂದಕೆಯಿಕ್ಕದೆ ಭುಜವ ಚಪ್ಪರಿಸಲಾಗ । ನಕ್ಕವರ ಬಲಹುರಿದು ಹೋಯಿತು ಅಕ್ಕಟಕ್ಕಟಾ ನೀ ವೀರನೆಂದೇ ॥ ರಕುತವಕುಡಿದ ನೀಚನೆಂದೆನ । ತಿರಿದುತಿಂದ, ರಕ್ಕಸಿಯನುಕೂಡಿದನೆಂದೆನೆ । ಒಡಲಬಾಕ ನೊಕ್ಕು ನಿನಗೆ ಬಹಳಪೆಂದೆನೇ-ಭೀಮನೇ ॥ ೨ ॥ ತಿಳಿದು ಪ್ರಾಣೇಶವಿಠಲನಿಚ್ಚೆ ಇಳೆಯೊಳುದಿಸಿ ಹಲವುಮತವ ನೆಲಕ ವೊರಿಸಿ । ಮರುತಮತವ ನಿಲಹಾಕಿದ ಗುರುಗಳೆಂದೇ । ತುಳುವರಲ್ಲಿ ಪುಟ್ಟಿದೆಯೆಂದೆನೆ । ಬಹಳ ಗುಗ್ಗರಿಮೆಲಿದ ಭೂತಮುಗುವು ಎಂದೆನೇ-ಭಾರತೀಶ । ಸಲಹೋ ಬಿಡದಲೆನ್ನನೆಂದರೆ-ಮಧ್ವನೆ ॥ ೩ ॥

೬೪. ರಾಗ--ಮಾರವಿ (ಆದಿತಾಳ).

ಭಾರತೀರಮಣ–ನಂಬಿದೆ ಪಾದವಾರಿಜಾ ಕರುಣಾ ವಾರಿಧೆ ಯನ್ನನು । ದೂರ ನೋಡದೆ ನಿನ್ನ ಸಾರೆಗರೆದು ಭಯವಾರಿಸಿ ಸಲಹೋ ॥ ಪ ॥ ನೀಲ ಲೋಹಿತನಾಪಿತನೇ ಗೋಪಾಲನಸುತಾ । ಕಾಳಕೂಟಪಾನಿ ವಿಶಾಲಾಂಬಕಾ ಮಾರರಿಂದ । ವೇಳೆವೇಳೆಗಳಲ್ಲಿ ವೋಲಗವ ಕೈಕೊಂಬುವ ಕಾಳೀವಲ್ಲಭ, ಭೇಶಭಾಸ್ಕರರೋಲು ಸನ್ನಿಭ ॥ ಈಲೌಕಿಕನರರಾಲಯಕಾಯಸದೆ ವಾಲಯ ಸುಮತಿಯ ಪಾಲಿಪುದೊಲಿದು ॥ ೧ ॥ ಜಾನಕೀವತಿ–ಸೇವೆ ಮಾಡಿದ್ಯೆ ಕಾಣೆನೋ ಪ್ರತಿ । ಯಾನಿನಗಾರಾರಾ ಭುವನದೊಳಗೆ ಗಂಧವಹನೆ ॥ ಮು ದ್ರಿಯ ಕೊಂಡು ಕ್ಷಣದೊಳಗೆ ಜಲಧಿಯನ್ನೆ ಹಾರಿದೆ । ಸೀತೆಗುಂಗುರವನ್ನೆ ತೋರಿದೆ । ಆನಗರವನು ದಹಸಗೈಸಿ ಬಹು ದಾನವರ ನಳಿದು ದಶಾನನ ನೊದ್ದೆ ॥ ೨ ॥ ಪಾಪದೂರನೇ–ವೃಕೋದರ–ಶ್ರೀದ್ರೌಪದೀಶನೇ । ವಿಪಿನಚ ರಿಸಿ ಕುರುಪತಿಯ ತರಿದು ಕ್ಷಿತಿಪರನ್ನು ಬಿಡಿಸಿದಯ್ಯೆ ಪಾಂಡವರ (ಪರಿ) ಪಾಲಕ । ಕೋಪನಾಶನ–ಉದ್ಧರಿಸೆನ್ನ–ಚಾಪಭಂಜನ, ಶ್ರೀಪತಿದ್ವಯ ಪದ ಆವಜ ಭಜಿಸುವನೇ ಪರಮೇಷ್ಠಿಯ ರೂಪ ಗುಣಾಢ್ಯ॥ ೩ ॥ ದೇಶಿಕೋತ್ತಮ– ಮಾರುತಿ, ಇಂದಿರೇಶನ ಪ್ರೇಮ। ಸಂಪಾದಿಸಿಕೊಂಡತಿಶಯ ಭಕುತಿಯಿಂದಾ ಲೀ ಸಮಿಾಚೀನವಾಗಿ । ತ್ರಿಂಶತಿಸಪ್ತಸಂಖ್ಯಾದರುಶನಗ್ರಂಥ ವಿರಚಿಸಿ, ದುರ್ಭಾಷ್ಯವಸಂತರಾಸಲಹುವರನಾಭಾಸಮಾಡಿದೆ ವ್ಯಾಸಭಜಕ ನಿನ್ನ ದಾಸ ನೆನಿಸಿಕೊಳ್ಳೋ ॥ ೪ ॥ ಅಂಜನಾಸುತ, ಪ್ರಾಣೇಶವಿಠಲನಂಜಲನೊಯ್ಯ್ವುತ । ಭುಂಜಿಸಿದೆಯಲೊ ನಿರಂಜನ ಕಪಿ ಪ್ರಭಂಜನ, ಕೊಡು ಕೃತಾಂಜಲಿಯಿಂ ಬೇಡುವೆ । ಕಂಜನಾಭನ ಸ್ಮರಣೆ ದಿವಾ ಸಂಜೆಯಲಿ ಘನ ಪುಂಜ ಸುಗುಣ ಮಣಿಮಂಜರಿ ಅರ್ಥ ವರಂಜಳ ತಿಳಿಸೋ ಧನಂಜಯರಕ್ಷ ॥ ೫ ॥

೬೫. ರಾಗ–ಬ್ಯಾಗಡೆ (ಆದಿತಾಳ).

ಎತ್ತಾರೇ ಹಿಂದಿನಾ ಮಾತು । ಭಾರತೀಶ ನಿನ್ನ–ಭೃತ್ಯರು ತಮ್ಮನು ಮರಿತು । ನೀ ಸಲಹದಿದ್ದರೆ ಹೀಗೆಂದು ॥ ಪ ॥ ಮೂಗು ಹಿಡಕೊಂಡು ಕುಳಿತಿದ್ದಿ ನೂರತೊಂಭತ್ತೆಂಟು ಕಲ್ಪ । ಆಗಲೊಬ್ಬರೂ ನಿನ್ನನಾರೆಂದು

ಕೇಳಾರೋ ॥ ಈಗ ದೇವರ ದಯೆಯಿಂದ ಹದಿನಾಲ್ಕು ಲೋಕಕೆ ಮಂತ್ರಿ
ಯಾಗಿ ಸಂತೋಷದಿಂದ ಪೇಲು ಮೆರೆವುದಕ್ಕೀ ಗರ್ವವೆಂದು ॥ ೧ ॥ ಊರ
ನೀರದಲೆ ಕಂಡಗಿಡದ ತೊಪ್ಪಲುಗಳ ತಿಂದು । ಅರಣ್ಯದೊಳು ಬಹುಕಾಲ
ಬದುಕಿದ್ದು ಮತ್ತೂ । ಶ್ರೀರಾಮನಾಳಾಗಿ ಶಿಲೆಯ ಪೊತ್ತುದು ಜಗವೆಲ್ಲಾ
ಬಲ್ಲದು ಮುಂದೆ। ವಾರಿಜಾಸನ ಪದವಿಯಾಳೆಂದು ಹರಿ ನುಡಿದುದಕೀ ಗರ್ವ
ಯೆಂದು ॥ ೨ ॥ ತಿರಿದುಂಡು ಹನ್ನೆರಡಬ್ದ ವನವಾಸ ಅಜ್ಞಾತಾವೊಂದು—
ವರುಷ ಮತ್ಸ್ಯಾಧಿಪನಾಗಾರದಲಿ ಪಾಕಮಾಡಿ ॥ ತರುಣೀ ಮಾನಭಂಗವ
ನೋಡಿ ಸುಮ್ಮನಿದ್ದೆಯಾಗ, ಕೃಷ್ಣ । ತರಿದು ದುರ್ಯೋಧನರ, ರಾಜ್ಯನಿಮ
ಗಿತ್ತುದಕೀ ಗರ್ವವೆಂದು ॥ ೩ ॥ ಎಲ್ಲರೂ ಕಂಡದ್ದು ಹುರಳಿ ಗುಗ್ಗರಿ ತಿಂದು,
ಭಿಕ್ಷಾರ್ಥಿಯಾಗಿ । ಮುಳ್ಳುಮರದಡಿಯಲ್ಲಿ ಕುಳಿತದ್ದು ಬಿರಿಬದರಿಯಲ್ಲಿ ॥
ಸುಳ್ಳಲ್ಲ, ವೇದವ್ಯಾಸಾನಂತ ವೇದಾರ್ಥ ತಿಳಿಸಿ ಸಕಲ ಬಲ್ಲವನೆಂದು ನೆನರೂ
ಕೊಟ್ಟದೆವೇ ಈ ಗರ್ವವೆಂದು ॥ ೪ ॥ ಏನೆಂಬುವ ಸರ್ಪರಲ್ಲಿ ಹೊಕ್ಕು ಬಳಕೆ
ಮಾಡುತಿದ್ದಿ, ಹೀನರು ನಿನಗೀಸು ನೀರಹಾಕರಿದು ಕೇಳಿ ॥ ಪ್ರಾಣೇಶವಿಠಲನ್ನ
ಭಜಿಸಿ ಪೂರ್ಣ ದಯೆಕ ಪಾತ್ರನಾಗಿ । ಮಾನಾಂಕಾರಿ ಮುಖುಂದರ್ಶನೆ
ಗೊಂಬುದಕ್ಕೀ ಗರ್ವವೆಂದು ॥ ೫ ॥

೬೬ ರಾಗ—ಭೈರವಿ (ಅಟತಾಳ) [ರಾಮಾಂಜನೇಯ ಸಂವಾದ].

ರಾಘವನಾಡಿದ ಮಾತಿಗಾಂಜನೇಯ ಬಿನ್ನವಿಸುವದು । ಈಗ ಪೇಳುವೆ
ಸಜ್ಜನರಾಲಿಸುವದು ॥ ಪ ॥ ಆ ರವಿನಂದನನು ತಾ ಮೇರೆ ಮಾಡಿ ಅಟ್ಟಿ
ದನು । ವಾನರರುಗಳನು ತಿಂಗಳು ಮೀರಿತಿಂದಿಗೆ ॥ ಮಾರುತಿ ಕೇಳೀಮಾತು
ಇನ್ನಾರ ಕಾಣೆನು ಬಲ್ಲಿದರ। ನಾರಿಯೆಲ್ಲಿಹಳೋ ವಾರ್ತೆತಾರೋ ನೀ
ಪೋಗೀ ॥ ೧ ॥ ಸ್ವಾಮಿಪಾಲಿಸೊ ಅಪ್ಪಣೆ । ನಾ ಮುಂಚೆ ಪೋಗುವೆ
ತಡವ ಮಾಡದೆ ಎಲ್ಲೀಗೆನ್ನ । ಭೂಮಿಜಾರಮಣ ॥ ಈ ಮುದ್ರೆ ಕೊಂಡು
ಪೋಗೋ, ಶಾಮಲಾಪತಿ ದಿಕ್ಕಿಗೆ । ಸಮುದ್ರದಾಟ ವೇಗ ಪಾವಮಾನಿ
ಕೇಳೊ ॥ ೨ ॥ ಭೂತಲಾಕಾಶ ಲೋಕಾದಿ ಪಾತಾಳದೊಳಗಿರಲಿ । ನಾ ತರು
ವೆನು ವಾರ್ತೆ--ಜಗನ್ನಾಥ ಪರಾಕು, । ಹೇ ತರಳ, ತ್ರಿಲೋಕವಿಖ್ಯಾತನಾ
ಗಿಹ ರಾವಣಪಾತಕ ಕೊಂಡು ಪೋಗಿಹ । ಸೀತೆಯ ಕೇಳೊ ॥ ೩ ॥

ಬುದ್ಧಿ ದೇವನೀಕೊಟ್ಟಂಥ ಬುದ್ಧಿಯಿಂದಲೇ ಅವನ ಗುದ್ದಿ ಸರ್ವ ಬಲವನ್ನೂ ಒದ್ದು ಬರುವೆನೊ ॥ ಮುದ್ದು ಕಂದ ರಕ್ಕಸ ರವಧ್ಯರೋ ವರವಡೆದು ರುದ್ರ ನಿಂದ, ಮಾಡದಿರೊ ಗದ್ದಲ, ಕೇಳೊ ॥ ೪ ॥ ತಂದೆ ರಾಮಾ, ನಿನ್ನ ದಯೆ ಯಿಂದ ಈಡಲ್ಲವೊ ಯನಗೆ । ನಂದಿಧ್ವಜಾ ಈ ರಕ್ಕಸರೊಂದು ತೃಣವೋ ॥ ಕಂದ ಈ ವೇಳೆಯೊಳೇನು ಬಂದುದನುಭೋಗಿಸಿ ನಾನು । ಕೊಂದು ಹಾಕುವ ದಿನವೂ ಮುಂದುಂಟು ಕೇಳೋ ॥ ೫ ॥ ದೇವಿಯ ನೋಡಿ ಬರು ವಾಗ ತಾವಂತು ಕೆಣಕಲು ದಾನವರು, ಸುಮ್ಮನಿರಲೇನು ದೇವದೇವೇಶ ॥ ಕೋಪಿದಾಗ್ರೇಶನೆ ನೀನು ಸಾವಿರಾಳಿಗೆ ಒಬ್ಬನೇ ಆ ವಿಚಾರವ ಮನಕೆ ತರುವದೇ ಕೇಳೊ ॥ ೬ ॥ ಹೇಳಿದ ಮಾತು ಕಟ್ಟದ ಕೂಳು ನಿಲ್ಲವೊ । ಆ ವನದೊಳೇನಹದೊ ಬಲ್ಲೆನೇ ಪ್ರಾಣೇಶವಿರಲಾ ॥ ಬಾಲಕ ಹನುಮಂತ ನಿನ್ನೊಳಗನ್ನಾ ರಾಣಿಯೆಲ್ಲಿಹಳೋ ನೋಡಿಬರುವುದಕಾಲಸ್ಯ ಕೇಳೋ ॥ ೭ ॥

೬೭. ರಾಗ–ಕಾಂಬೋಧಿ (ಏಕತಾಳ).

ರಾಮರಾಮಾಯೆಂದು ಮಾರುತಿಯು ನಡೆದ–ನೋಮವದನೆ ಜಾನಕೀ ಯನು ಹುಡುಕಾ ॥ ಪ ॥ ಹರಿಯಿಂದ ಗುರುತುಪಡೆದು ತನ್ನ ಶಿಖದಲಿ । ಧರಿಸಿಕೊಂಡತಿಶಯ ಭಕುತಿಯಲಿ । ತೆರಳಿ ಮುಂದುಮುಂದಕೆ ಕಡಲಸಮೀ ಪದಿ ವಾನರಾಧೀಶ ಮಾಡಿದ ವಾಸವನೂ ॥ ೧ ॥ ರವಿಜನ ಭಯದಿಂದ ಕಪಿ ಗಳೆಲ್ಲವು ಎದೆಯನೊಡೆದು ನಗದೊಳು ಕುಳಿತಿರಲು । ಪವನಜನು ಬಂದು ವಿಚಾರವಮಾಡಲು ಸಾಗರವ ದಾಟಲೊಬ್ಬಗೊಶವಲ್ಲವೆಂದರೆಲ್ಲರಲ್ಲಿ ॥ ೨ ॥ ನಮ್ಮನು ರಕ್ಷಿಸೋ ಕುಲಮಣಿಯೆ ವಾಸುದೇವನಹೊಮ್ಮಗನ, ಎಂದು ಕಪಿಗಳು ಯಾಚಿಸೆ ॥ ಗಮ್ಮನೆಹಾರಿ ರಕ್ಕಸಿ ಹೊಟ್ಟೆಹೊಕ್ಕು ದಾಟ ಮತ್ತೇ । ಒಮ್ಮೆ ಒಬ್ಬಳನು ಸೀಳಿ ಪುರಪ್ರವೇಶ ಮಾಡಿದ ॥ ೩ ॥ ಗಿಡಗಿಡ ಚರಿಸುತ ಸ್ಥಳಸ್ಥಳದಲಿ ಬಲು, ಹುಡುಕುತ ಮೂಜಗಪೂಜಿತನ–ಮಡದಿಯಾಕೃತಿ ಯನು ಕಾಣಲಾ ಕ್ಷಣದೊಳು । ತಡೆದನಲ್ಲಿಯೇ ಪದಗಳ ಮುಂದಕ್ಕಿಡ ದಲೇ ॥ ೪ ॥ ಋಷಿಗಳಂದದಿ ಪ್ರಾಣೇಶವಿರಲನೆನುತಿರೆಶಶಿಮುಖಿಯಳು ಯಾಂಜನೇಪದಬಿಸಜಾಂಘ್ರಿಗಳಿಗೆರಗಿ ಜಯಜಯವೆಂದು । ಉಸಿರಿದ ರಘು ಪತಿಯ ಸುದ್ದಿ ವಿಸ್ತರದಲಿ ॥ ರಾಮ ॥ ೫ ॥

೬೮. ರಾಗ–ಕಾಂಬೋಧಿ (ಝಂಪೆತಾಳ) [ಸೀತಾಂಜನೇಯ ಸಂವಾದ].

ನಮೋನಮೋ ರಾಮ ಕಳುಹಿಸಿದನಮ್ಮಾ । ಮಮ ಸ್ವಾಮಿ ಬದುಕಿ ಹನೆ ಪೇಳೊ ತಮ್ಮ ॥ ಪ ॥ ವಾಸುದೇವನು ಜಗವ ಸೃಜಿಸುವನು ಕೆಡಿಸುವನು ನಾಶವೆಲ್ಲಿಹದು ರಘುವರ್ಯಗಮ್ಮಾ ॥ ವಾಸವಾಗಿರೆ ವನದಿ ಮೃಗ ತರಲು ಪೋಗಿ ಜಗದೀಶ ನುಡಿದನು ಕಡೆಯ ಮಾತು ತಮ್ಮ ॥ ೧ ॥ ಖಳ ಮಾಯೆಯಲಿ ಬರಲು ರಾಘವನು ಸಂಹರಿಸೆ । ನೆಲಕುರುಳಿ ಕೂಗಿದನು ಅವನೇ ಅಮ್ಮಾ ॥ ಬಲುವಿಂದ ಲಕ್ಷ್ಮಣನ ಬೈದು ಅಟ್ಟದೆ ನಾನು । ಜಲಜಾಕ್ಷ ನೋರ್ವನಿಹನೇನೋ ತಮ್ಮ ॥ ೨ ॥ ಅನುಜಯುಕ್ತದಿ ದೇವ ಕಪಿದಂಡುನೆರಹಿಹನು । ಹನುಮಂತನಾ ರಾಮದೂತನಮ್ಮಾ ॥ ಇನಿತು ಸತ್ಯವೊ ಅನೃತವೊ-ನಂಬಿಗ್ಯಾಗದು ಮನದ-ಅನುಮಾನ ಬಿಡುವಂತೆ ಮಾಡೋ ತಮ್ಮ ॥ ೩ ॥ ಸಿರಿಕಾಂತ ಶ್ರೀಮಂತ ಕರುಣದಲಿ ಕೊಟ್ಟಹನು । ಗುರುತಿನುಂಗುರವನಿದು ನೋಡಿರಮ್ಮಾ ॥ ಪರಮಾತ್ಮನಿಗೆ ದೂತನಹುದು ಶುಭವಾರ್ತೆಗಳೆ, ಇರುವನೆಲ್ಲೆದುವಿಸ್ತರಿಸೆಲೋ ತಮ್ಮ ॥ ೪ ॥ ಕಾನನದೆ ಚರಿಸುತ ರವಿಸುತಗೊಲಿದು ಶಕ್ರಜನ । ಹಾನಿಮಾಡಿದನಲ್ಲೇಯಿರುವ ನಮ್ಮಾ ॥ ಜಾನಕಿಯೆಂದೆನ್ನನು ನಿತ್ಯದಲಿ ನೆನಸಿ, ಏನು ಮಾಡುವನೊ ಪೇಳುವದೋ ತಮ್ಮ ॥ ೫ ॥ ನಿನ್ನಗಲಿ ವ್ಯಾಕುಲದಿ, ನರರಂತೆ ಕೇಶವನು । ಅನ್ನಉದಕವನ್ನೆಲ್ಲಾ ಜರಿದನಮ್ಮಾ ॥ ಪನ್ನಗಾರಿಧ್ವಜನು ಬಂದು ದನುಜರ ಗೆಲಿದು । ಯನ್ನ ಕೂಡುವುದ ನಾ ಕಾಣೆ ತಮ್ಮ ॥ ೬ ॥ ತಾಯೆ ರಾವಣನಳಿದು ನಾನೊಯ್ವೆ ನಿನ್ನೀಗ–ನೋಯಿಸದೆ, ಹರಿಗೀಡು ಆವನಮ್ಮಾ ॥ ನಾಯಕನು ನೀಂ ಭೃತ್ಯರೊಳು, ತ್ವರಿತ ಬಹದೆಂದು । ಕಾಯಜಪಿತನಿಗೆ ಬಿನ್ನೈಸೋ ತಮ್ಮ ॥ ೭ ॥ ಪೋಗಿ ಬರುವೆನು ನಿಮ್ಮ ಗುರುತು ಏನಿದೆ ಕೊಟ್ಟು । ಬೇಗನಪ್ಪಣೆಯೆನಗೆ ಈವದಮ್ಮಾ ॥ ನಾಗಶಯನಗೆ ರಾಗಟೆಯನಿತ್ತು ಪದಕೆ ತಲೆಬಾಗಿರುವ ಳೇಳದಲಿಯೆನ್ನೋ ತಮ್ಮ ॥ ೮ ॥ ನಳಿನಮುಖಿಯೆ ನಮೋನಮೋ ದಯೆಯಿರಲಿ ಸ್ವಲ್ಪದಿನ–ದೊಳಗೆ ಬರುವೆವು ಚಿಂತೆ ಬೇಡವಮ್ಮ ॥ ಭಳಿ ಭಳಿರೆ ಪ್ರಾಣೇಶವಿಠ್ಠಲನ ಪೂರ್ಣದಯೆ–ಗಳಿಸಿ ಅಜಪಟ್ಟವನು ಆಳೊ ತಮ್ಮ ॥ ೯ ॥

೬೯. ರಾಗ–ವರಾಳಿ (ಅಟತಾಳ).

ಹಾಳುಮಾಡಿದ– ಹನುಮ – ಸಾಲುವನಗಳ । ಧಾಳಿಕೊಟ್ಟನಿತರ ಜನಕ । ಕೇಳಲಿಡನು ದನುಜಸೆಂದು ॥ ಪ ॥ ಚರರು ಪೇಳಲವನು ಖತಿಯು ಲಿರುವ ದಳವ ಕಳುಹಲದನು । ತರಿದ ಭಯುವಬಡದೆ ಮುಂದಕೆ । ಚರಣ ವಿಡದೆ ಬಹುಸಮರ್ಥ ॥ ಹಾಳು ॥ ೧ ॥ ಹರಿಜಿತ ಬಲು ಭರದಿ ಬರಲು । ಧರವು ಸಿಗುವದಿವನ ವಶಕೆ । ಮುರೇಳುಮುಖನ ಕಾಂಬುವೆನೆನುತ । ಕರವ ಮರೆದ ಮರುತಕುವರ ॥ ೨ ॥ ದಾನವಪತಿಯಲ್ಲಿ ಪೋಗಿ–ಏನು ಯೋಚನೆ ಯನ್ನು ಮಾಡದೆ । ತಾನು ಗಂಭೀರಸ್ವರದಿ ಪೇಳ್ದ । ಪ್ರಾಣೇಶ ವಿಟ್ಠಲನ ಮಹತ್ಮಯನು, ॥ ೩ ॥

೭೦. ರಾಗ–ಕಾಂಬೋಧಿ (ಝಂಪೆತಾಳ).

ದಿತಿಜಕುಲ ತರಿಯು ಬಂದೆನೋ–ನಿನ್ನ ವೈರಿ ರಘುಪತಿಯು ನಿಜದೂತ ನಾನೆ । ಮತಿಹೀನ ಕಪಿ ನಿನ್ನ ಗುಣವ ತೋರಿದೆ ನಮ್ಮ ಹತವಮಾಡುವನಾ ವನೋ । ಈಗ ॥ ಪ ॥ ಅಬ್ಬರಿಸಿ ಮಾತನಾಡಿದ ನಿಂತು ಹನುಮಂತ । ಕೊಬ್ಬು ಸಲ್ಲದೊ ಅಸುರನೆ ಹಿಂದೆ । ಇಬ್ಬರೂ ಸ್ವರ್ಣನಾಮಕರ । ನೆಲಕೆ ದಬ್ಬಿದವನಾರೋ ಬಹುಮಕರ–ಬುದ್ಧಿ ಹಬ್ಬಿತೇ ನಿನಗೆ । ವಿಧಿಶಿವಕರಾ ॥ ಅಬ್ಜ ಪೂಜಿತನು ನಿನ್ನ ಸೀಳುವಾಗಲಿ ವೀರಬೊಬ್ಬೆಯಿಕ್ಕುವೆ ನಾನಲೋ । ಮರುಳೇ ॥ ೧ ॥ ನಗೆ ಬರುವದಯ್ಯ ಕಪಿ ನಿನ್ನಿಂದ–ಹಗರಣದ ಮಾತುಗಳನು ಕೇಳಿ । ಬಿಗವು ಹೇಳುವನು ನಾನಲ್ಲಾ–ಮೂರು ಜಗದಿಯನ್ನರಿಯುದವರಿಲ್ಲಾ–ಭಾಗ್ಯ–ಮಿಗಿಲಾಗಿ ಘಳಿಸಿಹೆನೋ ಬಲ್ಲ್ಯಾ ॥ ನಗಜಾಧಿಪತಿಯಿಂದ ವರವ ಪಡೆದಿಹೆ ಒಬ್ಬರಿಗೆ ಶಿಗಿಸ್ಯಾಅರಿಕಯಿರಲೀ–ಕಪಿಯೇ ॥ ೨ ॥ ಪುಸಿ ಯಲ್ಲವಿನಿತು ನೀನಾಡಿದುದು ರಾವಣನೆ । ವಸುಧಿಜೆಯ ಕೊಂಡು ಒರಲು ಬೆಂಕಿ–ವಸನದೊಳಗಿಟ್ಟ ತೆರದಂತೇ ॥ ನೋಡು ಪಶುಪತಿಯು ವರವು ಆದ ರಂತೇ । ನಿನ್ನ ದಶವದನಗಳು ಉಳಿಯದಂತೆ ॥ ದಶರಥನ ತನಯು ಸವರುವ ತಿಳಿದು ಬಿಟ್ಟುಕೊಡು–ಶಶಿಮುಖಿಯು, ಬದುಕಿಕೊಳ್ಳೋ ಮರುಳೇ ॥ ೩ ॥ ಇನ್ನೊಂದು ಮಾತನಾಡಿದರಾಡೊ ತಾಳುವೆನೊ । ಚನ್ನ ಸೀತೆಯನು ಬಿಡೆ ನೋ ದಂಡು ॥ ಯನ್ನ ಪೋಲೆಸಿತಿನ್ನು ಬರಲೀ–ಸ್ವಲ್ಪ–ಖಿನ್ನನಾಗೆನೊ

ತಿಳಿದು ಇರಲೀ । ಇದಕೂ ಘನ್ನತೆಯು ಬರಲೆನ್ನ ಹರಲೆ ॥ ಸಣ್ಣ ಮನುಜರು ಹತ್ತುಕೋಟಿ ಕೂಡಿದರೇನು । ಯನ್ನ ಸಮನಾಹರೇನೋ । ಕಪಿಯೋ ॥ ೪ ॥ ಸೊಕ್ಕಿ ನುಡಿಯಲು ಬೇಡ ತಾಳಲಾರೆನೊ ಬಹಳ । ಕಕ್ಕಸವು ತುಂಬಿತನಗೆ, ಮಣ್ಣು-ಮುಕ್ಕಿಸುವೆ, ಕುಂಭಿಣಿಗೆ ಕೆಡಹೀ । ಬಿಡದೆ ರಕ್ಕುತವ ಸುರಿಸುವೆನೊ ಮಡುಹಿ ॥ ಆಗ ಚಿಕ್ಕ ನರಿಯಂತೆ ಬಾಯ್ಬಿರೆವೆ । ಪೊಕ್ಕು ಲವಣಸಮುದ್ರ ಪಾತಳದೊಳಗಡಗೆ । ತೆಕ್ಕೆಯಲಿ ಪಿಡಿದು ತರುವೇ-ಮರುಳೇ ॥ ೫ ॥ ಹತ್ತುಶಿರಗಳೂ ವಿಂಶತಿ ಭುಜವು ಮನಯೊಳಗೆ ಕತ್ತಿವಟ್ಟಹವು ಒಂದೂ ಗುದ್ದ ॥ ಸುತ್ತ ನೆರೆದಿಪ ಚರರಹಿಂಡಸುರರ । ಸಿತ್ತವಾಳುವೆ ನಾನು ಚಂಡ-ನಮ್ಮ ಪಿತ್ತ ತುಂಬಿಹುದೆಲ್ಲ ಕಂಡ್ಯಾ ॥ ಎತ್ತಹೋಗಲು ಬೇಡ ಯನ್ನ ಬಳಿಯಲಿನೀರು ಉತ್ತಮಾನ್ನವ ಕೂಡುವೆನೋ । ಕಪಿಯೋ ॥ ೬ ॥ ತೈಲವಿಲ್ಲದ ದೀಪದಾ ಬೆಳಕು ನಿಜವಲ್ಲ ಕೇಳು ದನುಜನೆ ನಾರುವೆನು ಕೂಗೀ । ನಾಳೆ ಬರುವುದು ನಮ್ಮ ದಂಡು । ಲಂಕ ಹಾಳುಮಾಡುವದ ನೀ ಕಂಡು ಕಂಡು । ಗೋಳನಾಡುವದು ಬಲು ಭಂಡೂ ॥ ವಾಲಿಯೆಂಬುವನು ಬಲು ಭಂಟ ನೀ ಬಲ್ಲೆ-ಸಿರಿಲೋಲ ಸಂಹರ ಮಾಡಿದಾ । ಮರುಳೇ ॥ ೭ ॥ ಅಡವಿಯೊಳು ಮನೆಮಾಡಿ ತನ್ನ ಬಿಲ್ಲ ತಾವ್ ಪೊತ್ತು । ಒಡಲ ಹಸಿವೆ ಈರ್ವರೂ ನಿರುತಾ । ಗಿಡಗಡವ ತಿರುಗುವುದು ಕಂಡೇ-ಯನ್ನ-ಒಡನೆ ಪುಸಿಯೇಕವಗೆ ದಂಡೇ । ಇನ್ನು ತದೆಯೆ ರೂಪವ ನಿನ್ನ ತುಂಡೇ-ಕಡಿದು ಶಿಕ್ಷಿಸುವೆ ಯನಗಭಿಮುಖನು ಆಗದಲೆ ನಡೆಯೊ ನಿನ್ನ ಬಂದ ಕಡೆಗೆ । ಕಪಿಯೋ ॥ ೮ ॥ ಕಟ್ಟಜಾತಿಯೆ, ಹೀಗೆನಾಡುವರೆ ಇನಿತಂದು । ಮುಷ್ಟಿಯಲಿ ಅವನ ಎದೆಗೇ ಗುದ್ದೆ । ಅಷ್ಟುಮಾತ್ರಕೆ ಧರಣಿಗುರುಳೀ-ರಕ್ತ ಕಟ್ಟು ಇಲ್ಲದೆ ಸುರಿಯೆ ಅರಳಿಯಂತೆ-ನಷ್ಟವಾಗಲು ದೇಹ ಬಳಲಿ ॥ ಸಿಟ್ಟನಿಂದಲ ಯೆದ್ದು, ಏನು ನೋಡುವಿರಿವನ-ಕಟ್ಟ ಕಿಚ್ಚನು ಬಾಲಕೇ । ಎಂದಾ ॥ ೯ ॥ ಪುಚ್ಛವನು ಪಿಡಿದು ಅಸುರರು ಸೀರೆಗಳ ಸುತ್ತೆ । ಹೆಚ್ಚಿಕ ಮುಂದಕ ಬೆಳೆಯಲೂ ಮಿಗಿಲು ॥ ತುಚ್ಛಗೈದರು ತಿಳಿಯಲಿಲ್ಲಾ ಬೆಂಕಿಹಚ್ಚಲಿಕೆ ಪಟ್ಟಣವನೆಲ್ಲಾ । ಉರಿಯು ಮುಚ್ಚಿಕೊಂಡಿತು ಮಡಿದರೆಲ್ಲ ॥ ಎಚ್ಚತ್ತು ಕೆಲವು ಜನ ಹಲವು ಕಡೆಯಲಿ ಪೋಗಿ ಬಚ್ಚಿಟ್ಟುಕೊಂಡುಳಿದರು ಪ್ರಾಣಾ

॥ ೧೦ ॥ ಸ್ವಾಮಿ ಪ್ರಾಣೇಶವಿಠಲನ ಆಜ್ಞೆದಿಂ ಪೋಗಿ । ಭೂಮಿಜೆಯ ಗುರುತು ಕೊಂಡು ಖಳರಾ, ಸ್ತೋಮವಧಿಶ್ಯಬ್ಧಿ ಹಾರಿದನು-ಭಕ್ತಪ್ರೇಮ ನಂಘ್ರಿಗಳಿಗೆರಗಿದನೂ ॥ ಅಲ್ಲಿಯಾಮಾತನಲ್ಲಪೇಳಿದನು ಭೂಮಿಯೊಳು ಯಂತ್ರವುದ್ಧಾರಕನು ಎನಿಸುವನು ಈ ಮುನಿಪನುಧ್ವಚಾರ್ಯರ್‌-ಆರ್ಯರ್‌ ॥ ೧೧ ॥

೭೧. ರಾಗ-ಭೈರವಿ (ಝಂಪೆತಾಳ)

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪ ॥ ಅಂಜನಾಸುತನಿಗೆ ಅಗಣಿತ ದನುಜ ಸಂಹರಗೆ । ಕಂಜನಾಭನ ಭಜನೆ ಮಾಡುವವಗೆ ॥ ಭುಂಜಿಸಿ ವಿಷವ । ಸುರರ ಸಂಘವಗೆಲಿಸಿದ । ವಸಿಗೆ ಸಂಜೀವನವ ತಂದ ಹನುಮಂತಗೆ ॥ ಜಯಮಂಗಳಂ ॥ ೧ ॥ ಕುಂತೀನಂದನ ವೃಕೋದರಗೆ ಅಘದೂರಗೆ । ಸಂತರೊಡೆಯಗೆ । ದ್ರೌಪದಿಯರಸಗೆ । ಅಂತಕಾತ್ಮಜಗೆ ಉಪದೇಶವನು ಮಾಡ್ದವಗೆ । ಚಿಂತರಹಿತಗೆ । ಭಕ್ತಜನಪಾಲಗೆ ॥ ಜಯ ॥ ೨ ॥ ಕಲಿಯುಗದಿ ಮಧ್ವಮುನಿಯಾಗಿ ಅವತರಿಸಿದಗ । ಹಲವು ಮತಗಳ ಸೋಲಿಸಿದ ಧೀರಗೆ ॥ ಸುಲಭ ಜ್ಞಾನವನು ಬುಧರಿಗೊರೆದ ದಯಾಸಾಗರಗೆ । ಕಲಿಹ ಪ್ರಾಣೇಶ ವಿಠಲನ ದಾಸಗೆ ॥ ಜಯಮಂಗಳಂ ॥ ೩ ॥

೭೨ ರಾಗ-ಸಾರಂಗ (ಅಟತಾಳ).

ಮಂಗಳಂ ಜಯ ಮಂಗಳಂ । ಶುಭ ಮಂಗಳ ಶ್ರೀಕೃಷ್ಣವಲ್ಲಭಗೆ ॥ ಪ ॥ ವೈನತೇಯಾಹಂಕಾರ ಪರಿಹರಗೆ । ಭಾನುಪುತ್ರಾರಿಧ್ವಜವೇರಿದಗೆ । ಸ್ಥಾಣುರೂಪಗಳ ಕೋಟಿ ರೋಮದಿ ತೋರಿದಗೆ । ಆನಗಜವಂದ್ಯ ಪದಾಂಬುಜಗೆ ॥ ಮಂಗಳಂ ॥ ೧ ॥ ಪಾದೋದಕದಿ ಬಿದ್ದು ಎದ್ದವಗೆ । ಕಾದ ಬಂದವರ ವಧಿಸಿದವಗೆ ॥ ಹೇ ದಯಾಂಬುಧೆ ಕಾಯೆಂದಂಬೆ ಬಿನ್ನೈಸಲು ಮೋದಪಿತ್ತಹಿಗಳಿಗೊಲಿದವಗೆ ॥ ೨ ॥ ಗೋಪೀಚಂದನ ತಂದ ಮುನಿವರಗೆ-ಗೋಪೀಕಂದನ ಪ್ರತಿಷ್ಠಿಸಿದವಗೆ ॥ ಗೋಪಾರಿನಗ ಕುಲಿಶಗೆ । ತ್ರಯರೂಪಗೆ ಶ್ರೀ ಪ್ರಾಣೇಶವಿಠಲನ ದೂತಗೆ ॥ ಪ ॥ ೩ ॥

೭೩. ರಾಗ–ಸೌರಾಷ್ಟ್ರ (ಏಕತಾಳ).

ಭಾರತೀರಮಣಗೆ ಮಂಗಳ–ದ್ವಿಜ–ಮಾರಾರಿಮುಖವಿನುತಗೆ ಮಂಗಳ ॥ ಭಾರತೀರಮಣಗೆ ಮಂಗಳ ॥ ಪಲ್ಲ ॥ ದೋಷರಹಿತಗೆ ಆಂಜನೇಯುನಿಗೆ–ರಘುಪತಿ–ದಾಸ ಪವಮಾನಿಗೆ ಮಂಗಳ ॥ ಆಶೆಯಿಲ್ಲದೆ ಶ್ರೀಶನಂಘ್ರಿ ಪೂಜಿಸಿದಗೆ । ಶ್ವಾಸ ಸರ್ವರಲ್ಲಿ ಮಾಳ್ಪವಗೆ ॥ ಮಂಗಳ ॥ ೧ ॥ ಆಯುರಾಯುಜ ಅಜಗರಸುತ್ತಿ ಕೊಳಲಾಗಿ । ನೋಯುದಲಿದ್ದವಗೆ ಮಂಗಳ ॥ ಆಯೋನಿಜೆಗೆ ಪುಷ್ಪ ತಂದು ಕೊಟ್ಟವನಿಗೆ । ರಾಯಕೌರವರಳಿದವಗೆ ಮಂಗಳ ॥ ೨ ॥ ಲೋಕದೊಳಗೆ ಮಧ್ವರಾಯಗೆ ಸದ್ವೈಷ್ಣವರಾ–ಸಾಕುವ ಮುನಿಪಗೆ ಮಂಗಳ ॥ ಮಾಕಾಂತ ಪ್ರಾಣೇಶ ವಿಟ್ಠಲ ಸರ್ವೋತ್ತಮನೆಂದು ಸಾಕಲ್ಯದಿಂ ಪೇಳಿದವಗೆ ॥ ಮಂಗಳಂ ॥ ೩ ॥

---

## (೨೦) ಲಕ್ಷ್ಮೀ ಸ್ತುತಿ.

೭೪. ರಾಗ–ಶಂಕರಾಭರಣ (ಅಟತಾಳ).

ವಸುಧೀಜೆ ಸೀತೆ ವೈದೇಹಿ–ನಾ ನಮಿಸುವೆ ಪಾದಾಬ್ಜಕೆ ಪಾಹಿ, ಅಹ ದಶಕಾರಿಸತಿ, ವಿಧಿ ವೃಷಭೇಶ ಪೂಜಿತೆ । ಬಿಸಜಮಂದಿರೆ ದೀನ ಆಸುರೇತ ರಾಂಘ್ರಿವೆ? ॥ ಪಲ್ಲ ॥ ಉದಿತಭಾಸ್ಕರ ಸಮಕಾಂತೆ । ದೇವಿ–ಪದುಮೇಶ ಗಮನ ನಿಶ್ಚಿಂತೆ, ಪಯೋದಧಿಜಾತೆ ಅಸುರಕೃತಾಂತೆ,–ಯನ್ನ ಹೃದಯಾರ್ತಿ ಕಳೆಯೋಜಯಂತ ॥ ಆಹಾ ॥ ಮಧುಕೈಟಭಾರಿಯ ಹೃದಯನಿಕೇತನೆ, ಚದುರೆ ಶ್ರೀರೂಪದಿ ಬುಧಜನರ ಪೊರೆವೆ ॥ ೧ ॥ ರಾಜೀವೋಪಮ ಸುನೇತ್ರೆ–ಸುವಿರಾಜಿಸುತಿಹೆ ಶುಭಗಾತ್ರೆ ॥ ಮೃಗರಾಜ ಮಧ್ಯಳೆ ಮುನಿಸ್ತೋತ್ರೆ । ಮುಕ್ತಿಭಾಜಪ್ರೀಯಳೆ ನೃಪಪುತ್ರೆ ॥ ಅಹಾ ಶ್ರೀಜನಾರ್ದನನಾಜ್ಞಾ ವ್ಯಾಜದಿಂ ಭೂದೇವಿ ರಾಜಸರಿಗೆ ದ್ವಂದ್ವ ಭೋಜನಗೈಸುವೆ ॥ ೨ ॥ ಖಚರಾಳು ಬಂಧನ ನಿಟಲನೇತ್ರ ಖಚರವಂಶೋದ್ಭವ ಚಟುಲ । ದೇವ–ಖಚರಾಜ ಪ್ರಾಣೇಶ ವಿಠಲ–ರಾಣಿ, ಖಚರಾಶ್ಯೆ ಕಳಯನ್ನ ಕುಟಲಾ–ಅಹಾ ಖಚರಾಪಸ್ಯಂದನೆ ಖಚರಸುವಾಣೀ ಹೇ ಖಚರಾಶ ವೇಣಿಯೆ ಖಚರಮರ್ದನ ದುರ್ಗೆ ॥ ೩ ॥

೭೫. ರಾಗ–ರೇಗುಪ್ತಿ (ಆದಿತಾಳ).

ಕಾಯೋ ಕಾಯೋ ಇಂದಿರೆ–ತೋಯಜಾಕ್ಷಿ ವೈನತೇಯ ವರೂಥೆ ಈ ಕಾಯುವೇ ನಿನ್ನದು ನೋಯಿಸದೆನ್ನನು ॥ ಕಾಯೆ ಕಾಯೆ ॥ ಪಲ್ಲ ॥ ದೊಡ್ಡಾತ ನರಸಿ ನೀ ನಮ್ಮ–ಕೈಯೊಡ್ಡಿ ಬೇಡುವೆ ನುಡಿಕೇಳಮ್ಮ ॥ ಗುಡ್ಡದಂತಿಹ ದೋಷ ಕಡ್ಡಿಯಂತೋಡಿಸಲಾರೆಯಾ (ಹಾ ಹಾ)–ನಿನ್ನವನೆಂಬದರಿಯಾ (ಹಾ ಹಾ) ॥ ಇತ್ತ ಬಾಯೆನಲಾರೆಯಾ (ಹಾ ಹಾ) ಕೃತಾಂತಗೆನ್ನನಾರೀ ಯಾ (ಹಾ ಹಾ) ॥ ೧ ॥ ಬೊಮ್ಮಾದಿಗಳ ಪೊರೆವಾಕೆಂದು ಶ್ರುತಿಸಮ್ಮತವಾಗಿರೆ ನೀನಿಂದು ॥ ಯುಮ್ಮನು ನೋಡದ ಸುಮ್ಮನಿರೆ ಬಹದೆ ಭೂಷಣಾ (ಹಾ ಹಾ) ಬಿಡದೇತ್ರಯ ಈಷಣಾ (ಹಾ ಹಾ) ಮಾಳ್ಪವು ಬಹು ಶೋಷಣಾ (ಹಾ ಹಾ) ಬಿಡಿಸಿಮಾಡೆಪೋಷಣಾ (ಹಾ ಹಾ) ॥ ೨ ॥ ಸುರಪತಿ ಪ್ರಾಣೇಶವಿಠಲನಾ–ಪದ ಸರಸಿಜ ಪೊಂದಿಸೆ ಶ್ರೀಲಲನಾ ॥ ಅರಗಿನಂತೆ ಜನನಿ– । ಮರದಂತೆ ಮಕ್ಕಳು ಎಂಬರಾಹಾ (ಹಾ ಹಾ) ಆರ್ಯರನ್ನತೆ । ಶಂಬರಾಹಾ । ರಿಮಾತೆ ಹಾಟಕಾಂಬರಾ (ಹಾ ಹಾ) ಧಾರೆ ಮೆಚ್ಚಿ ಪಿತಾಂಬರಾ (ಹಾ ಹಾ) ॥ ೩ ॥

೭೬. ರಾಗ–ತೋಡಿ (ಆದಿತಾಳ).

ಕ್ಷೀರವಾರಿಧಿ ಸಂಭೂತೆ । ಪ್ರದ್ಯುಮ್ನಮಾತ । ಈರೇಳು ಲೋಕ ವಿಖ್ಯಾತೆ ॥ ಆರಾಧಿಪೆ ವಿವದೇರೆಮಲೆ ಹೃದ್ವಾರಿಜದೊಳಗೆ ಮುರಾರಿಯ ತೋರೆ ॥ ಪಲ್ಲ ॥ ಧಾತಾದಿ ದಿವಿಷತ್ಪೂಜಿತ ಸಲ್ಲೋಕದಾತೆ । ಜಾತ ಮಧ್ಯಾಂತ ರಹಿತೆ । ಸೀತ, ಸದ್ಗುಣಗಣವ್ರಾತೇ, ಭಜಕರಾಪ್ರೀತೆ । ಭೂತ ತನ್ಮಾತ್ರ ಗುಣವೀತೇ ॥ ಪಾತಕಾರಣ್ಯಕ ಜಾತವೇದನೆ, ಪುರುಹೂತಪೂಜಿತ ರಮೆ ॥ ಮಾತುಮಾತಿಗೆ ನಿನ್ನ ಪ್ರೀತಿರಮಣ ರಘುನಾಥನ ಸ್ಮರಣೆಯ ಆತು ರದಲಿ ಕೊಡೆ । ಸಿತಾಂಶುಮುಖಿ ॥ ೧ ॥ ಷಡುವಿಕಾರದೂರೆ ವ್ಯಾಪ್ತೆ (?) ಜ್ಞಾನಿಗಳಿಂ ಪ್ರಾಪ್ತೆ । ಬಿಡದ ಭಜಿಸುವವರಿಗಾಪ್ತೆ ॥ ನಡುಮನೆ ಸುತನೇವೆಗೆ ತೃಪ್ತೆ ॥ ದೋಷ ನಿರ್ಲಿಪ್ತೆ ॥ ಕಡು ದಯಾವಂತೆ ಸುಷುಪ್ತೆ ॥ ಪಡೆದು ಕಮಲಭವ ಮೃಡ ಪ್ರಮುಖರ, ವರ । ಕೂಡುವೆ ನಿರಂತರ ಬಡವನು ನಾ ನಿನ್ನೊಡಲಿಗೆ ಭಾರವ । ತಡೆಯದೆ ಶ್ರೀಹರಿಯಡಿಗಳರ್ಚಿಪುದಕೆ । ದೃಢ

ಮನ ಪಾಲಿಸು ॥ ೨ ॥ ಸಿಂಧುರಗಮನೆ ಅಹಿವೇಣೀ-ಲೋಕೈಕತ್ರಾಣೀ-ಮಂದಹಾಸಾಸ್ಯೆ ಕಲ್ಯಾಣಿ । ನಿಂದಿತಜನಸೂದನಿ-ಸರಸಿಜಪಾಣಿ । ಇಂದಿರಾದೇವಿ ಶುಭವಾಣೀ ॥ ನೊಂದೆನೆಜನ್ಮದಿಬಂದು, ಸುಖವನಾನೊಂದರಿಯೆನೆ ಅರವಿಂದಸದನೆ ವಾರೆಂದುಭಯವ ಪ್ರಾಣೇವಿಟ್ಠಲನ । ಚಂದದಿ ತುತಿಸುವಾನಂದವಪಡಿಸೇ ॥ ಕ್ಷೀರ ॥ ೩ ॥

೭೭. ರಾಗ-ಪೂರ್ವಿ (ಏಕತಾಳ).

ಕಾಯೆ, ನಿನ್ನಪದ-ತೋಯಜಪೆರಗುವೆ-ಮಾಯದೇವಿ, ಹರಿಕಾಯು ನಿವಾಸೇ ॥ ಕಾಯೋ ಕಾಯೋ ॥ ಪಲ್ಲ ॥ ಬುದ್ಧಿಯ ಪ್ರೇರಿಸೆ ಪ್ರದ್ಯುಮ್ನನಸತಿ । ಕರ್ದಮಜಾಲಯೆ । ಭದ್ರಶರೀರೇ ॥ ಕಾಯೆ ॥ ೧ ॥ ಇಂಗಡಲಾತ್ಮಜೆ-ಅಂಗನಾಕುಲಮಣಿ । ರಂಗನ ಪದಕಂಜ-ಭೃಂಗೆ ಕರುಣದಿ ॥ ಕಾಯೆ ॥ ೨ ॥ ಪ್ರಾಣೇಶವಿಠಲನ, ಮಾನಿನೀಯನ್ನಯ । ಹೀನತೆಯೆಣಿಸದೆ, ಪ್ರೋಣಿಸಿ ಮತಿಯ ॥ ೩ ॥

೭೮. ರಾಗ-ಸಾವೇರಿ (ಆದಿತಾಳ).

ಸೀತೆ, ಸದ್ಗುಣಗಣವ್ರಾತ ಈರೇಳುಲೋಕಮಾತೆ ಪ್ರಣತಜನ ಪ್ರೀತೆ ಸಾಗರಜಾತೆ ॥ ಮಾತುಮಾತಿಗೆ ರಘುನಾಥನಸ್ಮರಣೆಯ ಆತುರದಲಿ ಕೊಡು ಸಿತಾಂಶುವದನೆ ॥ ಪಲ್ಲ ॥ ಶ್ರೀ ಭೂ ದುರ್ಗಾಂಭ್ರಣೀ ಸ್ವರ್ಣಾಭೆ ರಾಮನ ರಾಣೀ । ಸಾಭಿಮಾನ ನಿನ್ನ ದಮ್ಮಾ ಬಾಲಕನ ಕರವ ಬಿಡದಲೆ ಸರ್ವದಾ ಬಾದರಾಯಣನಂಘ್ರಿ ಬಿಸಜದ್ವಯವನೇ ಭಜಿಸಲು ಜ್ಞಾನವ ಒಲಿಸುವದತಿ ಶೋಭನ ವಿಗ್ರಹೆ, ಹೆ ಬಡವನು ಗೈಯ್ಯಾ ಬಿನ್ನಪವನು ನೀ ಬಿಸುಟದ ಬಹ ಳಾಭಯ ಪರಿಹರಿಸೀ-ಭಕುತ ಜನರೊಳು ಬೆರಸುವದೇ ॥ ಸೀತೆ ॥ ೧ ॥ ಮಾ, ಕಂಜದಳನೇತ್ರೆ ಶ್ರೀಕುಂಭಿಣೀಜೆ ದಾತ ನೀ ಕರುಣದಿ ನೋಡೀ । ಕಕುಲಾತಿ (ಕಕ್ಕುಲಿತೆ) ಹಿಂಗಿಸೆ ॥ ಬೇಕುಸತ್ಸಾಧನವು, ಸಾಕು ದುರ್ವಿಷಯಗಳು, ಲೌಕಿಕಗಳೆಲ್ಲಾ ವೈದಿಕವಾಗಲೆನಗೆ ॥ ನಾಕು ವೊಗನಜನನೀ ಕರಿಗಮನೆ ಪರಾಕು ದಿವಿಜನುತೆ । ಶೋಕರಹಿತೆದನುಜಾ ಕುಲಸಂಹರೆ ಈ ಕಠಿಣ ಭವ ದೊಳೀಕೆ ದಣಿಸುತಿಹೆ ನೀ ಕಡೆಗೆತ್ತಲೆ ॥ ಸೀತೆ ॥ ೨ ॥ ದಾತ ಪ್ರಾಣೇಶ

ವಿಠಲ-ನೋತೆನೆಂದು ನಗಲು ನೀನಾತನ ದಾಯದಿಂ ಪುರುಹೂತನ ಸೋಲಿಸಿ ಪ್ರಖ್ಯಾತೆಯಾದೆ ಉದರಾಜಾತಸದನೆ ಸತ್ರಾಜಿತೆ ಲಕ್ಷ್ಮೀಯಾದಿ ದೇವತೆ ಭಾಸ್ಕರಕಾಂತೆ ॥ ಭೂತಳದೊಳಗೆ ಅನಾಥರಿಗೆ ವರಪ್ರದಾತೆ ಕೃಪಾನಿಧಿಯೇ, ತಡೆ ದುರ್ಮತಿ ಧಾತ। ವ್ರಜನಿ ಧರಿ ಪೋತನಕನಲದೆ, ವಾತ ಪೂಜಿತೆ, ರಮೆ ಪಾತು ಪ್ರತಿಕ್ಷಣದಿ ॥ ೩ ॥

೭೯. ರಾಗ-ಭೈರವಿ (ಅಟತಾಳ) ಉಗಾಭೋಗ.

ಬೊಮ್ಮನಸೊಲ್ಲೆನವ್ವ ವೃದ್ಧನಾಗಿಪನೆ, ಸಮ್ಮಿರನೊಲ್ಲೆನವ್ವನಿಂತು ನುಡಿವನೆ ॥ ಚರ್ಮಾಂಬರ ಶಂಕರನನೊಲ್ಲೆನವ್ವ। ಅಮ್ಮಮ್ಮ ರವಿನೋಡೆ ಉರಿಯುತ ಬರುವ ॥ ಸುನನಸರಪತಿಗೆ ಮೈಯೆಲ್ಲ ರಂಧ್ರ। ಕುಮ್ಮಟ್ಟುವದು ಕಾಂತಿ ದಿನ ದಿನ ಚಂದ್ರಗೆ ॥ ಧರ್ಮನ ಪೊಟ್ಟ ಗಣಪನೊಲ್ಲೆನವ್ವ। ಪಮ್ಮಿಚೀನಲ್ಲಾ ರುಮೊಗನನೊಲ್ಲೆವ್ವ। ನಮ್ಮ ಪ್ರಾಣೇಶವಿಟ್ಠಲನಲ್ಲ ಸುರರೊಳು। ಸಮ್ಮತನಾಗಿಪನೆಂದು ತುಂಬಿದಾನಂದದಿಂ। ರಮ್ಮೆ ನಗುತ ಮಾಲೆ ಹಾಕಿ ನಮಿಸಿದಳೂ ॥ ೧ ॥

೮೦. ರಾಗ-ಕಾಂಬೋಧಿ (ಅಟತಾಳ).

ಏನು ಸ್ನೇಹವನು ಮಾಡಿದಿರಯಮ್ಮಾ-ಮುಖ್ಯ ಪ್ರಾಣಸಖನ ಬಗೆ ಹೀಗೆಂದು ತಿಳಿಯದೇ ॥ ಪಲ್ಲ ॥ ಉಣಿಸುವ ಬೇಡಿದುದನಂಬಿರಾ-ಶ್ರೀವಾಮನನಾಗಿ ತಿರಿದುಂಡ ಬಲಿಯಲ್ಲಿ। ಘನವಸನವುಟ್ಟೀಪೆಂಬಿರಾ-ಅನುದಿನ ದಿಗಂಬರನಾಗಿ ತಿರುಗುವ ॥ ೧ ॥ ಮಣಿಭೂಷಣವನಿಟ್ಟೀಪೆಂಬಿರಾ-ಆವ-ಹಣವಿರೆ ಅಡವಿಯೊಳಿರುವಾನೆ ॥ ತನುನೋಡಿ ಮರುಳಾದೆವೆಂದಿರಾ-ನೀಲ ಘನದಂತಿರುವ ದೊಡ್ಡ ಚಲುವಿಕೆ ॥ ೨ ॥ ದುರಿತ ಬಂದರೆ ಕಾಯ್ವನೆಂಬಿರಾ-ತಾನೇ-ಕರೆಕರೆಪಟ್ಟ ದನುಜನಿಂದ ॥ ಪುರುಷನು ಗುಣವಂತನೆಂದಿರಾ-ಪಾಲ್ಮೊಸರ ಕದ್ದು ತಿಂಬುವ ವ್ರಜದೊಳು ॥ ೩ ॥ ಕಡು ದಯಾವಂತನೆಂದರಿದಿರ್ಯಾ-ಶಿರ-ಕಡಿದ ಮಾತೆಯ ದಯೆ ನೋಡಿರಿ ॥ ಸುಡಿಗೇಳಿ ಮರುಳಾದೇವೆಂದಿರಾ-ನಭ-ಪೊಡವಿ ನಡುಗುವಂತೆ ಕೂಗುವ ॥ ೪ ॥ ಜ್ಞಾನಿ ಈ ಕೃಷ್ಣ

ಿಂದರಿದಿರಾ–ನಿತ್ಯ–ಕಾನನದೊಳು ದನಕಾಯ್ವವನು ॥ ತಾನೇಕಾಣದವನು ುತ್ತೊಬ್ಬರು ಬೇಡಲೇನು ಕೊಡುವನೆಂಬವರು ಜನರು ॥ ೫ ॥ ಯನಗೆ ತಿಳಿ ಸುದೇನು ಮಾಯವ್ಹೋ–ಅವನ–ಮನೆಯ ಪೊಕ್ಕವರೆಂದು ತಿರುಗಾರು ॥ ಸುಗಾಲ ಗೆಳೆತನ ಮಾಡಿದ–ಫಾಲಾಕ್ಷನು ಸುಡುಗಾಡೊಳು ಸೇರಿದ ॥ ೬ ॥ ಂತು ಪೇಳಿದರೆ ತೀರೀತಮ್ಮ–ನಮ್ಮ ಕಂತುಪಿತನ ಮಹಾಮಹಿಮೆಯೂ ॥ ಂತಕಜ? ಪ್ರಾಣೇಶಪಟ್ಟಲಾ ನಮ್ಮಚಿಂತೆಯಕಳೆಯೆಂದೆರಗಿರಮ್ಮ ॥ ೭ ॥

೭೧ ರಾಗ–ಕಾಂಬೋಧಿ (ಝಂಪೆತಾಳ) ಸುಮ್ನೀಪದ

ದಾತೆ ಇಂದಿರೆ ವಾರಿ-ಜಾತ ಮಂದಿರೆ ಲೋಕ । ನಾಥೆ ಸುಖಪೂರ್ಣೇ ಿಖ್ಯಾತೆ ॥ ಬಿನ್ನವಿಸುವೆನೆಯನ್ನ ಮಾತು ಮನ್ನಿಪುದೇ ವಿಧಮಾತೆ ॥ ಪಲ್ಲ ॥ ರಾಸೀಯಥಿ, ಹೀಗೆ ಏನು ಕೊಟ್ಟನೊ ನಿನ್ನ ಕಾಣಿಸವೆ-ಕಣ್ಣು ಕುಲವಿಲ್ಲ । ಗೋತ್ರವಿಲ್ಲ ಹೆತ್ತವರ ಕ್ಷೋಣಿಯೊಳಗೊಬ್ಬರರಿತಿಲ್ಲ ॥ ೧ ॥ ಏನು ಮರು ಾದೆವ್ವ ಶ್ರೀನಾರಿಯಿಂಥವಗ । ಹೀನಳುಚ್ಛಿಷ್ಟ ಫಲಮೆದ್ದ ॥ ಬಡಬ್ರಾಹ್ಮ ಕೊಡ್ವರೆ–ಮಾನಪೇ ಇಲ್ಲ ನಗುತಿದ್ದ ॥ ೨ ॥ ಧವಚೋರ-ಬಹುಜಾರ ಸವ ತಿಯರೂ ಬಲುಮಂದಿ । ಅವರಿಗಾತ್ಮಜರು ಹತ್ತತ್ತು ॥ ನಿನ್ನೊಗತನದೊಳಿದ್ದ– ವಿವೇಕ ಮೂಲೋಕಕ ಗುರುತು ॥ ೩ ॥ ಅತ್ತಮಾವಗಳಿಲ್ಲ–ವೃತ್ತಿ ಕ್ಷೇತ್ರ ಗಳಿಲ್ಲ । ಹಸಿದರನ್ನಿಲ್ಲ ಮನೆಯಲ್ಲಿ । ಈ ಗಂಡನೊಡನೆಯೇನರ್ಥ ಪಡು ತಿಹೆಯೆ ನೀ ಬಲ್ಲೆ ॥ ೪ ॥ ನೇರಿದನು ಪತಿ ನಿನ್ನ–ತೌರುಮನ ನೋಡಲ್ಕೆ ಧಾರಿಣಿಯೊಳಗೆ ಬಹು ನಿಂದಾ ॥ ಭಕ್ತಿಯಿಂದವನ ಹ್ಯಾಗಾರಾಧಿಸುವದೋ ಸುರವೃಂದಾ ॥ ೫ ॥ ಶಿಶು ಹಿಂಸಕತಿ ಕಠಿಣ । ಹನನ್ಮುಖನಲ್ಲರ್ಭಕ ಹೆಂಗಸ ರಳಿದ ಪುಕ್ಕಾ ಬಹು ರಕ್ಕಾ ॥ ಕಲಹಗಂಟೇನು ಸೇವಿಸಿದ್ಯೊ ವ್ರತಗಳನು ಇವಸಿಕ್ಕಾ ॥ ೬ ॥ ಎಲ್ಲೆಲ್ಲಿ ನೋಡದರು । ಇಲ್ಲ ಪ್ರಾಣೇಶ ವಿಠಲನಂಥವರೂ ಎನಂಬೆ ॥ ಮುದದಿಂದ ಬಿಡದೆ ಅವನಲ್ಲಿ ಪೊಂದಿರ್ಪೆ ಜಗದಂಬೆ ॥ ೭ ॥

೭೨. ರಾಗ–ಕಲ್ಯಾಣಿ (ಆದಿತಾಳ).

ಅಂಗನಾಕುಲಶಿರೋಮಣಿ ಶ್ರೀಮಾ ಶೃಂಗಾರ ವನಧಿ ಗರುಡ ಧ್ವಜೆ ಮಂಗಳಾದೇವಿ । ಹಾಸಿಗೇಳು ॥ ಪ ॥ ಕ್ಷೀರಸಾಗರ ಕನ್ಯಾ, ವಿಧಿ, ।

ಮಾರಾಂತಕ ಶಕ್ರಕರಾರ್ಚಿತೆ, ವಾರಿಜಸದನೆ ಸಿರಿದೇವಿ || ಸಿರಿದೇವಿ ತ್ರೈಲೋಕಕೆ ಜನನೀ ರಕ್ಕಸಾರಿ || ಹಸೆಗೇಳು || ೧ || ಭಾರತಿ, ಪಾರ್ವತಿ ಶಾಮಲ ಮುಖ | ನೂರು ಸುರರರಸಿಯರೆಲ್ಲರು | ಮಾರಿಧರುಷದಲಿ ಪದಪಾಡಿ || ಪದಪಾಡಿ ಹಸೆಯ ಬರೆದಿಹರೆಲೆ ನಾರಾಯಣನ ರಾಣೀ || ಹಸೆಗೇಳು || ೨ || ಋಷಿಗಳು ವೇದಪುರಾಣಗಳುಪನಿಷದ್ವಾಕ್ಯಗಳಿಂದ ತುತಿಸುವರು | ವಸುಧೆ ಗಾನಂದ ಪಡಿಸಲು || ಪಡಿಸಲು ಶುಭಕುಂದರದನೆ ಅಸಿತಕುಂತಲೆಯೇ ಹಸೆಗೇಳು || ೩ || ಕಡೆಗಣ್ಣಿನ ನೋಟದಿ ಲೋಕವ | ತಡೆಯದೆ ಪುಟ್ಟಿಸಿ ಪಾಲಿಸಿ ಪುನಃ | ಕೆಡಿಸುವೆ ಸ್ವೇಚ್ಛೆಯಲಿ ವೈದರ್ಭೆ ಸತ್ರಾಜಿತ ಕೃತಿ | ಯೊಡತಿ ಜಯಾಮಾಯಾ || ಹಸೆಗೇಳು || ೪ || ಪ್ರಾಣೇಶವಿಠಲನೊಳು ದ್ವೇಷಿಪ ಹೀನರಸಂಹರಕೋಸುಗ ಧರಸಾಣಯಾಗಿಹಳೆ ಶ್ರುತಿವೇದ್ಯೆ || ಶ್ರುತಿವೇದ್ಯೆ ದೇವದೇವಿಕ ಅಹಿವೇಣಿ ಶುಕವಾಣಿ || ಹಸೆಗೇಳು || ೫ ||

೮೩ ರಾಗ–ಪೂರ್ವಿ (ಆದಿತಾಳ).

ಶೋಭನ ಶ್ರೀಭೂದುರ್ಗೆಗೆ ಶೋಭನ ಜಯ ಮಾಯಾಕೃತಿಗೆ | ಶೋಭನ ಶಾಂತಿ ಪಯಂತಿಗೆ || ಶೋಭನವೆ || ಪಲ್ಲ || ಕಡು ಹರುಷದಿ ದಿವಿಜರು ದನುಜರು | ಕಡಲನು ನಗದಿಂ ಮಥಿಸುತಲಿರೆ | ನಡಗರದಿಂದಲಿ ಪಯೋನಿಧಿಯೊಳಗುದ್ಭವಿಸಿದ || ಬಡನಡುವಿನ ಸುಂದರಿಯೆ ರಾಮನ | ಮುಡದಿ ಸೂಸುಕವಾ–ಮುಡಿ ಬಾರೇ || ೧ || ಕಮಲಜ ಈರ ಭವಸುರೇಂದ್ರರ | ರಮಣಿಯರಾನಂದದಿ ಪರಿಪರಿ | ಸುಮನಗಳಿಂ ನಿರ್ಮಿಸಿದ ಪ್ರತಿಯುಂಬಾ ಸೂಸುಕವ || ಸುಮನದಲರ್ಪಿಸಲ್ಕೈತಂದರೆ ರಮೆ, ತ್ವರದಯಮಾಡಿ ಮುಡಿ ಬಾರೆ || ೨ || ಪ್ರಾಣೇಶವಿಟ್ಠಲನ ವಕ್ಷಸ್ಥಳ ನೀನಾಶ್ರಯಿಸಿಹೆ ಅದಕಿನ್ನೂರ | ಕ್ಷೋಣಿಯೊಳಗಿಲ್ಲಲೆ ಭೂಷಣಗಳು ಆದರೂ ಸೇವಕರ ಆನಂದಾಭಿವೃದ್ಧಿಗೆ ತಂದ ಪ್ರಸೂನ ಪವಿತ್ರವ ಗೈಸಲ್ಕೇ–ನೀ ಮುಡ ಬಾರೇ || ೩ ||

೮೪. ರಾಗ–ಶಂಕರಾಭರಣ (ಅಟತಾಳ).

ಜೋ ಜೋ ಇಂದಿರೆ ಲಕುಮಿ ಜಯಂತ | ಜೋ ಜೋ ದಿನಮಣಿ ವಿಧುಕೋಟಿ ಕಾಂತೆ || ಜೋ ಜೋ ಅಕ್ಷರೆ ಅಸುರಕೃತಾಂತೆ | ಜೋ ಜೋ

ಕರುಣಾವಾರಿಧೆ ಜಯವಂತೆ ॥ ಜೋ ಜೋ ॥ ಪಲ್ಲ ॥ ಧಾಮತ್ರಯಾಂಬರಾಲಂಕಾರಯುಧಳಾಗಿ ಸ್ವಾಮಿಸೇವೆಯ ಮಾಡಿ ಸಾಲದೆ ನೀ ಪೂರ್ಣ ॥ ಕಾಮುಳಾದರೂಯಿನ್ನು ಆತನಲ್ಲಿಹೆ ಗುಣ । ಸೀಮೆಯಿಲ್ಲದವು ನೋಡುತಲಿ ಹಿಗ್ಗುವಳೆ ॥ ೧ ॥ ಪ್ರಳಯಕಾಲದೊಳಾರಾರಿಲ್ಲದಾಗಲು ಆಲ । ದಲೆಯಾಗಿ ಸಂತೋಷದಿಂದ ಗಂಡನ ಮೇಲೆ । ಮಲಗಿಸಿಕೊಂಡು ಕೃತಾರ್ಥಳಾದೆಲೆ ತಾಯಿ । ಭಳಿರೆ ನಿನ್ನೆಷ್ಟು ಬಣ್ಣಿಪೆ ಜಗನ್ಮಾತೆ ॥ ೨ ॥ ಎಲ್ಲರ ಗುಣ ವಿಚಾರಿಸಿ, ಮಾಲಿಕೆಯ ಖಳ । ದಲ್ಲಣನಿಗೆ ಹಾಕಿ ಸತಿಯೆನಿಸಿದೆ ದೇವಿ ॥ ಎಲ್ಲೆಲ್ಲಿ ಪತಿಯ ಅಪ್ರತಿರೂಪವಿಹುವೋ ನೀನಲ್ಲೆಲ್ಲ ವಕ್ಷದೊಳಿಹ ಭಾಗ್ಯವಂತೆ ॥ ೩ ॥ ಧನುಕೊಂದು ಶಕ್ರ, ನರಕರೊಳು ಕಾದಿದೆ । ದನುಜನವಂಚಿಸಿ ನಿಜರಮಣನಯ್ಯದಿದೆ ॥ ವನಜಜಾಂಡವ ಬಸುರೊಳಗಿಟ್ಟು ಪಡೆದೆ ಪವನಮಾತೆ ವಿಖ್ಯಾತೆ ಶರನಿಧಿಜಾತ ॥ ಜೋ ಜೋ ॥ ೪ ॥ ಮಾಸ ಜಯಾ ಮಾಯಾಕೃತಿ ಶಾಂತೆ ಶ್ರೀಸೀತೆ । ಜ್ಞಾನಿ ಅಂಭ್ರುಣಿ ದುರ್ಗೆದಕ್ಷಿಣಿ, ನೀ ಯನ್ನ ॥ ಹೀನತೆಯೆಣಿಸದೆ ಪೋಣಿಸಿ ಸನ್ಮತಿ, ಪ್ರಾಣೇಶವಿಠಲನ ಧ್ಯಾನದೊಳಿರಿಸೆ ॥ ಜೋ ಜೋ ॥ ೫ ॥

---

## ೨೧ (ಪರಮಾತ್ಮಸ್ತುತಿ).

ಲ೫. ರಾಗ–ಸಾರಂಗ (ತ್ರಿಪುಡೆತಾಳ).

ಶರಣು ಹೊಕ್ಕೆನೊ ನಿನ್ನ–ಜಾತರೂಪಾಂಗದ–ವರದ ಕೈಪಿಡಿಯೆನ್ನ । ಪರಮೇಷ್ಠಿವಂದಿತ । ಚರಣ, ಸುರತಿರೋರನ್ನ । ಸುಖಜ್ಞಾನಪೂರ್ಣ ॥ ಪ ॥ ಉರಗಪರ್ವತನಿಲಯ ಭಕತರ ಕರೆದು ವರಗಳ ಕೊಡುವ ವೆಂಕಟ ಗರುಡವಾಹನ ಲಕ್ಷ್ಮೀಪತಿ ಮಂದರಧರಾಧರಧಾರ ದೇವ ॥ ಶರಣು ॥ ಅನು ॥ ಕಾಮಿತಾರ್ಥದ ರಂಗ–ಮಧ್ವಮುನಿಪೂಜಿತ–ರಾಮ ಭವಭಯ ಭಂಗ ॥ ದಶರೂಪಿ ಶರಧಿಜಾಪ್ರೇಮ । ಸುಜನರಸಂಗ । ಕೊಡುಎಂದಿಗೆಂದಿಗೂ ॥ ತಾಮಸರಿಪು ಕುರಂಗಾ ಅಂಕಸಖಸಾಂಗ ॥ ಹೇಮಗರ್ಭನ ನಾಭೀಕಮಲದಿ ನೀ ಮುದದಿ ಪಡೆದೀ ಚರಾಚರ ನೇಮದಿಂದಲಿ ಸೃಜಿಸವೇಳಿದ । ಸ್ವಾಮಿ ನೀ ಸರ್ವರೊಳುವ್ಯಾಪಿಸಿ ॥ ಭೂಮಿಯೊಳು ಸಾತ್ವಿಕರು ರಾಜಸ

ತಾಮಸರ ನಿರ್ಮಾಣ ಮಾಡಿಸುಧಾಮಸಖಗತಿ ದುರ್ಗತಿಗಳನು ॥ ಈ ಮರುಳು ಜನರಿಗೀಯುತ । ನೀಮಡಿವಂತನು ಎನಿಸುವೆಲಾಸು । ತ್ರಾಮಾ ವರಜ ಬಲು ಸೋಜಿಗವೋ ಇದು । ವ್ಯೋಮನದೀವದ ನೀ ಮಾಡಿದ ಮರ್ಯಾದೆಯೋ ಮರಳ್ಯೊಬ್ಬರು ಹೇಳುವರುಂಟೇ ॥ ೧ ॥ ಪುಂಡರೀಕದಳಾಕ್ಷ–ತನ್ಮಾತ್ರಾದೂರ–ಪಾಂಡುರಂಗಘಕಕ್ಷ । ಗಾಂಗೇಯ ಗೀತ । ಪಾಂಡುನಂದನ ಪಕ್ಷ–ದರಚಕ್ರಪಾಣಿ । ಪುಂಡಕೌರವ ಶಿಕ್ಷ ॥ ಶ್ರೀವತ್ಸವಕ್ಷ ॥ ಕುಂಡಲೀಶ ಶಯನ ವಿದುರಸಖ ಮಾರ್ತಾಂಡಕೋಟಿಪ್ರಕಾಶ ಹರಿವುದ್ದಂಡ ಮಹಿಮನೆ ಕಂದಕಂಡವರಂಡಲೆದು ಯನ್ನಶರೀರವು ॥ ಬೆಂಡು ಆಯಿತು ಕಾಣೆ ಕಾಯ್ವ ರಜಾಂಡೋದರ ನಿನ್ನುಳಿದು ಓರ್ವರ । ದಂಡಿಸದೆ ಬರುತಿರ್ಪ ಜನ್ಮವ ಖಂಡಿಸಿ, ನಿನ್ನ ನಾಮವುಣಿಸೊ ॥ ಮಂಡೋದರೀ ವಲ್ಲಭ–ಶಕಟಪ್ರಚಂಡ ಮುರಾದಿ ಖಳಕುಲಾಂತಕ । ದಂಡಾತ್ಮಜರಕ್ಷಕ ಹರಿ ಮೇಷಾಂಡಜ ಸಂಹರ ಕರುಣದಿ ನೋಡೋ ॥ ೨ ॥ ಧರಣಿಯೊಳಗಿನ ರಾಯರೆಂಬುವರು ಸೇವಕಾ ಪುರುಷನಿಗೆ ಬಹು ದ್ರವ್ಯ-ವಿತ್ತಿನ್ನು ಸೇಷವ । ತರಲಿಗೊಡರೆಲೊ ದೇಹ-ಬಹುತಾಳಿ ಬಂದನೊ । ಕರುಣವಿಲ್ಲವೆ ಜೀಯ । ಸಾಕನ್ನೊ ಮಾಯಾ-॥ ವರನೆ, ಅಟವುಮಾತ್ರ ಹಣಕೂಡದಿರೊ ನಾ ಬಲ್ಲೆನೊ ಕುಡಿದಸ್ತನ–ಪಯಶರಧಿ ದ್ವಿಗುಣವುಯನ್ನ, ಆಸ್ಥಿಯು । ಗಿರಿಗೆ ದ್ವಿಗುಣವಾಗಿಪ್ಪವೊ ಇಂತಿ ॥ ಕರೆಕರೆಯ ನಾನಾರಿಗುಸಿರಲಿ । ಸುರಪತಿ ಪ್ರಾಣೇಶವಿಟ್ಠಲ । ತರುಣಿ, ಸುತ, ಧನ ಪಶು ಎಂಬುವ ಈ ವರನು ಮೋಹದ ಮಡುವೋಳ್ಬಿದ್ದು ॥ ಹರಿನಿನ್ನೊಂದಿನ ಸ್ಮರಿಸಿಲ್ಲವೋ ನೀನರಿಯೆ । ನಿಂತ್ಯಲ್ಲವೋ ವರತರ ಕರಿವರದಿ ವ್ಯಾಲೆನರಿದದು ಮಾಡುವದರಿಕರಿಷಂಡಮೃಗೇಂದ್ರ ವರಾಕು ॥ ಶರಣು ॥ ೩ ॥

೮೬. ರಾಗ–ಭೈರವಿ (ತ್ರಿಪುಡೆತಾಳ).

ಜಯ ಪಾಂಡುರಂಗ ಹೋ ಜಲದನಿಭಾಂಗ ಹೋ ಜಗದಂತರಂಗ ಹೋ । ಜಯಪಾಂಡುರಂಗ ಹೋ ॥ ಪ ॥ ನೀಲಭೂಧರವಾಸ ಕೌಸ್ತುಭ ಭೂಷ–ರಮೆಯಾಧೀಶ ಸುಮನಸಪಾಲ ಗುಣಗಂಭೀರ । ನವನೀತಚೋರ ಕುಜನಕುಠಾರ ॥ ನರಹರಿ ॥ ಫಾಲಲೋಚನಬಂಧು, ದೈತ್ಯನಕೊಂದು,

ವೇದವತಂದು ದ್ರುಹಿಣಗೆಮೇಲುಕರುಣದಲಿತ್ತೆ-ಮಂದರಪೊತ್ತೆ । ಸುಂದರಮೂರ್ತಿ ॥ ಜಯ ॥ ೧ ॥ ನಿಗಮವಂದಿತರಾಮ ಹರಿ ಪೂರ್ಣಕಾಮ, ಸದ್ಗುಣಧಾಮ, ವಾಮನ, ಮಗನನೂಗಿಲಿಪುಟ್ಟ । ಹೇಮನಕುಟ್ಟ ಅವನಿತಂದಿಟ್ಟ, ಈರೇಳು- । ಜಗದಿ ಪೂಜಿತನಾ ಕೈಟಭಭೇದಿ ಇಭಪನಕಾಯ್ದಿ । ಪ್ರಣತರ ಅಘವನೋಡಿಸುತಿಪ್ಪ ಹಲಾಯುಧತಲ್ಪ ಮನ್ಮಥನಪ್ಪ ॥ ಜಯ ಪಾಂಡುರಂಗ ॥ ೨ ॥ ವೇದ ವಿಸ್ತರಮಾಡ್ದೀ ದಾನವ ಬೇಡ್ದೀ, ದನುಜ ನಿಗ್ರ್ಯೋಡ್ದೀ ಕುರುಕುಲಸೂದನ, ಕಿರೀಟಸೂತ ಪವಮಾನತಾತ, ದುರ್ಬಲನಾಥ ಎನ್ನನು ॥ ಆದರದಿ ಕೃಪಿಡಿಯೋ, ದುರಿತವ ತಡೆಯೊ ದುರ್ಮತಿ ಕಡಿಯೊ ಅಗಣಿತ ಮೋದ ಪ್ರಾಣೇಶವಿಠಲ, ನರಮೃಗ ಸಿಟಲನೇತ್ರ ಅಕುಟಲ ॥ ಜಯ ಪಾಂಡುರಂಗ ॥ ೩ ॥

೮೭. ರಾಗ-ನಾಟ (ಝಂಪೆತಾಳ).

ಯೋಗಧರತಾತಕಭಲೋಕಪತಿ ದೇವ ಸಿರಿ । ಯೋಗ ನಿನ ಪದಕೆ ಶರಣೆಂಬುವೆನೊ ಕಾಯೋ ॥ ಪ ॥ ಯೋಗಾಂಡದೊಳಹೊರಗೆ ವ್ಯಾಪ್ತನ, ಗುಣರಹಿತನ । ಯೋಗಾಂಬರಧರ ಷ-ಮುಖ ಜನಕ । ಯೋಗಗಾತ್ರಪದೂರ ಪಗ-ದ್ವಯ ಅವತಾರ-ಯೋಗಪಾಣೇಸುತಪ್ರಿಯ ಸುಮತಿ ಕೊಡು ಜೀಯ ॥ ೧ ॥ ಯೋಗರಾಯಗೆ ಅದೇ ಪದವಿ ಕರುಣಿಸಿ ಕೊಟ್ಟೆ । ಯೋಗೇಶಣಾಪ್ತಪಿತ, ದಂತಿವರದ ॥ ಯೋಗದಲ್ಲಿ ಮನಸು ನಿಶ್ಚೈನೊ ಹಾ ಕರ್ತೃತ್ವ ಯೋಗಫಲ ಸ್ವೀಕರಿಸುತಿಹ ಕಂಜನಾಭ ॥ ೨ ॥ ಯೋಗನಾಗೆಯೋ ದುರ್ಮತಿಗಳಿಗೆಂಡಗೂ ನೀನು । ಯೋಗಿಜನವಂದ್ಯ ಹಾ ನಾರೀಪತಿ ನಿನ್ನ । ಯೋಗಸೇವಕರೊಳಿಡೋ ಪ್ರಾಣೇಶವಿಟ್ಠಲನೇ । ಯೋಗಹ್ರಾಸವಿವರ್ಜಘಟಜಕರಪೂಜ್ಯ ॥ ೩ ॥

೮೮ ರಾಗ-ಸಾವೇರಿ (ಏಕತಾಳ).

ರಾಮ ಗೋವಿಂದ ಪೂರ್ಣ ಕಾಮ ಸದ್ಗುಣಗಣ । ಧಾಮ, ದಶಾನನ ವಿರಾಮ ನತಜನಪ್ರೇಮ ॥ ಸೋಮಧರಸಖ ಕಾಮಜನಕ, ಸುರಸ್ತೋಮಕರಾರ್ಚಿತ, ವಾಮನ ಪಾಲಿಸೋ ॥ ಪಲ್ಲ ॥ ಮಂದರಾಚಲಧರ ಇಂದಿರೆ

ಯರಸ ಮುಕುಂದ ಲೋಕೇಶಾ। ಶತಾನಂದ ವಂದಿತ ಪರಮಾನಂದ ಯಶೋದಾನಂದನಂದನ, ಸುದತಿಯರ। ವೃಂದವ ಮೋಹಿಸುವ ವೃಂದಾವನ ಸಂಚಾರಿ ॥ ಮಂದಾಕಿನೀಪಿತ ವೃಂದಾರಕಗುರು ತಂದೆ ನಲಹೋಯೆನಲಂದು ಉದ್ಧರಿಸಿದೆ ಸಿಂಧುರವರನ, ಪುರಂದರಜಪ್ರಿಯ ಆ–ರಿಂದಮ ಹರಿ ದಶಸ್ಯಂದನತನಯನೆ ॥ ೧ ॥ ಪುಂಡರೀಕಾಕ್ಷನೆ ಮಾರ್ತಾಂಡಕೋಟಿ ಪ್ರಕಾಶ, ಪುಂಡಕಂಸಾರಾತಿ ಉದ್ದಂಡವಿಕ್ರಮನೇ। ಭೂಮಂಡಲದೊಳಗೆ ಪ್ರಚಂಡ ಮುಷ್ಟಿಕರನ್ನು। ಹಿಂಡಿಬಿಸುಟು ಬಲುಬಂಡು ಮಾಡಿದೆಯೋ ಆ ॥ ಖಂಡಲನನುಜನೆ ಭಂಡ ಕುರುಪನಿಗೆ ದಂಡಿಸಿ ತೋರಿದೆ ದಂಡ ಧರನ ಪುರವ। ಉಂಡುವಿಷವ ಶಶಿಮುಂಡೆಬಳಲೆ ಭಯ–ಖಂಡಿಸಿ ಸಲಹಿದೆ, ಅಂಡಜವಾಹನ ॥ ರಾಮ ಗೋವಿಂದ ॥ ೨ ॥ ಒಡೆಯ ಪ್ರಾಣೇಶವಿಠಲ–ಉಡುಪತಿತೇಜ ಅನುದಿನ–ಬಿಡದೆ ವಂದಿಪರ ಕರಪಿಡಿವ ನಿನ್ನ ಮಹಿಮೆ। ಕಡಲಾರಾಜಕನ್ನಿಕೆ ಜಡಜಾಸನಮುಖರು ಕಡೆಗಂಡುದ್ದಲ್ಲವೋ ಮದಡ ನರನಾಬಲ್ಲೆನೇ ದೃಢಭಕ್ತರಿಗೆ ವರ ತಡೆಯದೆ ಮುದದಿಂ। ಕೊಡುತಿಹ ಮಹಿಮನೆ। ಕಡುಕೃಪಾಮೂರುತಿ ಕಡಿನೆನ್ನ ಕುಮತಿ। ಪಿಡಿಸು ಸುಪಥವನು ಬಿಡಿಸು ಭವಭಯವ ಪೊಡವಿಪ ವರದಾ ॥ ರಾಮ ॥ ೩ ॥

೮೯. ರಾಗ–ನಾಟ (ಝಂಪೆತಾಳ).

* ಪಾಹಿ ನಾರಾಯಣನೆ ಪಾಹಿ ವಾಸುಕಿಶಯನ। ಪಾಹಿ ಗರುಡಧ್ವಜನೆ ಪಾಹಿ ಕಮಲಾಕ್ಷ ॥ ಪ ॥ ೧ ಸಂವತ್ಸರಾಂಬರಧರ–ನತಜನಪಾಲ। ೨ ಸಂವತ್ಸರ ಹರೇ ಕಾರುಣ್ಯನಿಧಿಯೇ ॥ ೩ ಸಂವತ್ಸರಕ ನಿನ್ನ ಸಮರಾರೊ ತ್ರಿಜಗದಿ। ೪ ಸಂವತ್ಸರ ಜಲಜಕ ೫ ಸಂವತ್ಸರೂಪಮಾ ॥ ೧ ॥ ೬ ಸಂವತ್ಸರಾಕ್ಷ ನುತ ಗಜವೈರಿಸಂಹರನೆ। ೭ ಸಂವತ್ಸರಾದಿ ೮ ಸಂವತ್ಸರರಿಪು ॥ ೯ ಸಂವತ್ಸರ ಕುವರನೆ ೧೦ ಸಂವತ್ಸರನೆ ಯನ್ನ। ೧೧ ಸಂವತ್ಸರವಳಿದು ಕೊಡು ೧೨ ಸಂವತ್ಸರ

---

* ಸಂವತ್ಸರಗಳ ಸಂಜ್ಞೆ:– ೧. ಶುಕ್ಲ. ೨. ಪ್ರಜಾಪತಿ. ೩. ವಿಕ್ರಮ. ೪. ಶ್ರೀಮುಖ. ೫. ಪಿಂಗಳ. ೬. ಚಿತ್ರಭಾನು. ೭. ಖರ. ೮ ರಾಕ್ಷಸ. ೯. ನಂದನ. ೧೦. ಈಶ್ವರ. ೧೧. ದುರ್ಮತಿ. ೧೨. ಸೌಮ್ಯ. ೧೩. ಆನಂದ. ೧೪. ಸರ್ವಜಿತು. ೧೫. ಮನ್ಮಥ. ೧೬. ಕ್ಷಯ. ೧೭. ಪರಾಭವ.

ಮತಿ ॥ ೨ ॥ ೧೩ ಸಂವತ್ಸರಸಮುಗ್ರ ಪ್ರಾಣೇಶವಿಠಲನೆ । ೧೪ ಸಂವತ್ಸರಸ್ವಾಮಿ ದೋಷದೂರ । ೧೫ ಸಂವತ್ಸರಪಿತ ಸಿರಿ * ೧೬ ಸಂವತ್ಸರನೇ ಕ್ಲೇಶ ೧೭ಸಂವತ್ಸರ ಮಾಡು ದೀನಕಲ್ಪತರು ॥ ೩ ।

೯೦. ರಾಗ–ರೇಗುಪ್ತಿ (ಮಟ್ಟತಾಳ).

ಗಂಗಾಪಿತ ರಾಘವ । ನಂಬಿದೆ ಶ್ಯಾಮ–ಲಾಂಗ ನಿನ್ನಯ ಪಾದವ ॥ ಮಂಗಳೆರಮಣ ಭುಜಂಗಧರಾರ್ಚಿತಾ ನಂಗಜಜನಕ ಪಾಲಿಸಿಂಗಡಲೊಡೆಯನೆ ॥ ಪ ॥ ಶಫರ, ಕಮಠ, ಕೋಲ । ನೃಹರಿ, ಬಾಲ, ನೃಪಕುಲಪವನವ್ಯಾಲ ॥ ವಿಪಿನಸಂಚರಾ, ಕೃಷ್ಣ–ವಿಪುಳಾ ಬುದ್ಧ ಕಲ್ಕಿ– । ವಪುಧರ, ಅನಿರುದ್ಧ । ಕೃಪಣವತ್ಸಲ ಸ್ವಪರ್ಾ– ॥ ದವನೆ, ಹರಿ ಕಾಶ್ಯಪಿಯೊಳಗೆ ಸುರರಿಪುಹ । ತಿನನಕರಿವನ ನರಪತಿ ದ್ರುಪದನಂದನೆಯ ಪೊರೆದೀಶ್ವರ । ಕಪಟನಾಟಕ ಕಪಿಲರೂಪಿ ॥ ೧ ॥ ಕುರುಕುಲೋತ್ತಮನಾಗಾರದೊಳಗೆ ಕ್ಷೀರಸುರಿದೆ ಗೋಕುಲವಿಹಾರ ॥ ವರವಿಪ್ರಜರತಂದೆ ಹರಚಾಪಹನನ ಈ ಶರೀರವೇ ನಿನ್ನದು ಸರಿಬಂದದನು ಮಾಡೋ ॥ ಕರೆಕರೆಯ ಭವಶರಧಿಯೊಳು ಬಾಯ್ದೆರೆವೆ ರಕ್ಷಿಸುವರನು ಕಾಣೆನೊಬ್ಬರ ನಿನ್ನುಳಿದುರಗಶಯನನೇ ಧರಿಜವಲ್ಲಭ ಕರುಣಿಕೇಶವ ॥ ೨ ॥ ಜನನಮರಣದೂರ–ಇಂದ್ರಾನುಜ ಮುನಿಗೇಯಾಚಲಧರ । ವನರುಹಭವ ಸಂಕ್ರಂದನವಂದ್ಯ, ವೀತ ಆವನಿ ಮುಖತನ್ಮಾತ್ರಾಗುಣ ಪ್ರಾಣೇಶವಿಠಲ ॥ ಪ್ರನಮಿತಾಘಕಕ್ಶಾನಲ, ಕಂದರ್ಪನಪಿತನೆ ನಿನ್ನನುಗರೊಳಗಿಡೋ ಮಣಿಯ ಅನ್ಯರಿಗನಘ ಪಾಲಿಪುದನ ವರತಯನ್ನನು ಬಿಡದಲೆ ॥ ಗಂಗಾಪಿತ ॥ ೩ ॥

೯೧. ರಾಗ–ಸಾರಂಗ (ತ್ರಿಪುಡೆತಾಳ).

ವೆಂಕಟಾಚಲವಾಸ । ವಂದಿಪೆನೋ ತವ ಪದಪಂಕಜವ ನಿರ್ದೋಷ ॥ ವಾ ರಾಶಿಜಾ ದ್ರುಹಿಣ ಶಂಕರ ಪ್ರಮುಖಪೋಷ ಶ್ರೀ ಶ್ರೀನಿವಾಸ ॥ ಪ ॥ ವೆಂಕಟ, ಗದಾಸುದರುಶನ ವಿಜಯ–ಅಂಕಿತನೆ, ಗಾಂಗೇಯಚೈಲತಳಂಕಸನುಜ ಪಾಲಿಪುದು ಯನ್ನ ವಿಶಾ । ನಾಂಕಜನಕ, ಶಶಾಂಕ ಭಾಸ ॥ ಅನು

* ಅಸುರೀಸಂಪತ್ತು.

ಪಲ್ಲ || ಸ್ವಾಮಿ ಹೇ ನಿರಪೇಕ್ಷ–ಝುಷಕೂರ್ಮವರಾಹ || ಹೇಮಕಶ್ಯಪು ಶಿಕ್ಷ । ವಟು, ಭೃಗುಕುಲೋದ್ಭವ, ರಾಮ, ಪಾಂಡವಪಕ್ಷ ತ್ರಿಪುರಾರಿ, ಕಲ್ಕಿ । ಭೀಮವಂದಿತ, ತ್ರ್ಯಕ್ಷಸಖ, ವ್ರತತಿಜಾಕ್ಷ || ಕಾಮಿತಪ್ರದ ಕೈರವ ದಳ–ಶ್ಯಾಮ, ಸುಂದರಕೋಟಿಮಾರ, ಸು–ಧಾಮಪ್ರಿಯ । ಭಯವಿಪಿನ ವಹ್ನಿ, ಸು । ತ್ರಾಮನಂದನಪ್ರಾಣರಕ್ಷಕ || ಭೂಮಿಯೊಳು ದುರುಳರಿಪು, ಸಾಲಿ । ಗ್ರಾಮಮಂದಿರ–ಲಕುಮೀಮನೋಹರ, ಸಾಮಜೇಂದ್ರನ ಪೊರೆದ ಸಹಸ್ರ–ನಾಮ, ಕಾಳೀಮದಾಹ ದೇವತ್ರ || ಈಮಾಯಾತೃಣಕಾಷ್ಠಾದಿವ್ಯಾಪುತ । ಚಾಮೀಕರಭೂಷಣ ಶೋಭಿತ । ಹೇಮಾಚಲಮಂದಿರ ಮುನಿಗಣಸ್ತೋಮಾರ್ಚಿತ ಕರುಣಿಸು, ತ್ವರ್‍ಯಾ || ವೆಂಕಟಾಚಲವಾಸ || ೧ || ನೀರಚರ ನಗಧರ, ಕಿಟಿ, ನೃಹರಿ, ವಾಮನ । ಧರಣಿಪಸಂಹರ । ಕೋದಂಡಕರ, ಸತ್ಯಾರಮಣ, ಅಂಬರ–ವರ್ಜಿತ, ತುರಂಗಮವೇರಿ ಕುಂಭಿಣಿಭಾರ–ಇಳುಹಿದ ಉದಾರ || ಪರಾಶರಸುತ, ಕಪಿಲರೂಪಿ, ಸ–ಮೀರವಂದ್ಯ ಅನಸೂಯ ವರ-ಕುಮಾರ, ಪುಷ್ಕರ-ಕೇಶನನುಜ, ಮಂದಾರನತಜನ, ಎಶ್ವಧರಣಶರೀರ, ವ್ಯೋಮ ಸರಿತ್ಪಿತ ನಘ, ತುಷಾರಗಣವೈದುವರೊ ನಿನ್ನಯಾ । ಸಾರಮಹಿಮೆಯ ತಿಳಿಯಲಾರರು ನೀರಜಾಕ್ಷ । ಯೋ ಪಿತಾಮಾತಾಮಹನು ಮಿ–। ಕಷ್ಟರಿಂದೊಶ ಅಗ್ನಿಭಯನಿವಾರಣ । ನಾರೆಗರೆದು ಪೂರ್ರೈನಭಿಲಾಷೆಯ । ಘೋರಿಸುತಿಹ ತಾಪತ್ರಯಬಿಡಿಸೊ ರ–ಮಾರಮಣನೇ ಪ್ರಣತಾರ್ತಿ ಪರಿಹರ || ವೆಂಕಟಾಚಲವಾಸ || ೨ || ವೇದೋದ್ಧರ, ಕೂರ್ಮ, ಈ ಕ್ಷಿತಿಯ ಮಾಯದಲೊಯ್ದು ದುರ್ಮತಿಭರ್ಮ, ಲೋಚನಹ ತರಳ–ಪ್ರಹ್ಲಾದವರದ, ಸುಕರ್ಮಸ್ಥಿತ, ಮಾತೃಹಿಂಸಕನಾದ ನಿರಶಸುಶರ್ಮ ಪ್ರಮುಖರನ ಮರ್ಮ ಭೇದಿಸೇಳಿದ ಭೈಷ್ಮೀವಲ್ಲಭ ಶ್ರೀದ, ಬುದ್ಧ ಖಳಕುಲಭಂಜನ । ಬಾದರಾಯಣ ನಿಗಮವೇದ್ಯನೆ । ಮೋದಮಯಪ್ರಾಣೇಶವಿಟ್ಠಲ । ಕಾದುಕೋ ನಿನ್ನವರವನು ಎಂವಾದಿಮಧ್ವವಿದೂರ ಯನ್ನ ವಿ । ಷಾದಗುಣಗಳೆಣಿಸದೆ, ಕುಬುಜೆಗೆ । ಮೋದತೋರಿದ ದೀನಬಂಧು || ಶ್ರೀಧರ ಕೌಸ್ತುಭ ವಕ್ಷಸ್ಥಳ, ದ್ವಾದಶವಪುಸನ್ನಿಭ ನಿನ್ನಯ ಕ್ರೋಧಿಗಳೊಳು ಸ್ನೇಹವ ಪುನರಪಿ ಮೇದಿನಿಯೊಳು ಜನ್ಮವ ಕೊಡದಿರು || ೩ ||

೯೨. ರಾಗ–ತೋಡಿ (ತ್ರಿಪುಡೆತಾಳ).

ಪಕ್ಷಿವಾಹನ ಶ್ರೀವಾಮನ್ನ–ಅಂತರಿಕ್ಷಾಳಕಪ್ರಿಯ ಕಾಯೆನ್ನ। ಋಕ್ಷಪ ನಿಭ ಮಾಯಾಕಕ್ಷಾಗ್ನಿ ಹರೆ ಜಗತ್ಸುಕ್ಷೆ ನಂಬಿದೆನೆನ್ನುಪೇಕ್ಷೆಮಾಡಲಿ ಬೇಡ ॥ ಪಲ್ಲ ॥ ಅಂಜನಾಧರಾಧರಧಾಮ–ಹೇ ನಿರಂಜನ ವನಮಾಲಿ ಭೂಮಾ। ಪುಂಜಸುಗುಣನೆ ಪರಂಜ್ಯೋತಿ ಹರೇ ಕೃತ–। ಅಂಜಲಿಪುಟದಿಂಪಲಂಜಿ ಬೇಡುವೆ ಬಲ ॥ ಭಂಜನಾನುಜ, ವಿತತತ್ರಿಜಗಮಂಜುಳಾಂಗನೇ ವೀತ ಭೂಪಮುಖ। ಕಂಜನಾಭನೆ ತರುಣಿ ಶಿವ ನೃಪ ಕುಂಜರ ವರವ ಕರವ ಪಿಡಿಯೊ ॥ ೧ ॥ ಪಾಠೀಣ ಕಮಠ ವರಾಹ। ನೀಚಹಾಟಕಾರಿ ವಟು ಭೂಭುಜಹಾ ॥ ಖೇಟಾಹ ಬುದ್ಧ ಕಲ್ಕಿ ಘೋಟಕಾನನ ವಿಶ್ವನಾಟಕ ಧೈಷ್ಮೀ ಮುಖವಧೂಟನಿಯರವಲ್ಲಭ ॥ ಕೋಟಿಭಾಸ್ಕರತೇಜ ನಿನ್ನಯ ಆಟತಿಳಿಯಲು ಕೋಕನದಶುಭಪೀಠ ಲಕುಮಿ ಅಶಕ್ತರಹರು ಕಿ–ರೀಟಸಖ ನಿನ್ನವರೊಳ ಗಿಡೊ ॥ ೨ ॥ ಶಂತನುವಿನವಂಶ-ರಕ್ಷ, ಮಾತುಲಾಂತಕ ಜಲಜದಳಾಕ್ಷ। ಮಂಥಾರಿ ಶಿಶುಪಾಲ–ದಂತವಕ್ತ್ರ ಮುರಾದಿ। ಹಂತದಾನವರ ನಿಕೃಂತ ನಾಖಿಮದಹಾ–। ಸಂತಿಘನಿಪಿತ ವೇದವೇದ್ಯ ಅ। ನಂತನುಖಿಮನೆ, ಅತ್ರಿಸುತ ನಿಶ್ಚಿಂತ ಶ್ರೀ ಪ್ರಾಣೇಶವಿಠಲ, ದುರಂತಶಕ್ತಿ ಭವಾಬ್ಧಿಘಟಜಾ ॥ ಪಕ್ಷಿ ॥ ೩ ॥

೯೩. ರಾಗ–ಪೂರ್ವಿ (ಆದಿತಾಳ).

ಗಂಗಾಪಿತ ವೆಂಕಟಪರ್ವತನಿಲಯ–ಕೌಸಲ್ಯಾತನಯಾ। ಮಂಗಳೆ ವಲ್ಲಭ ಭವಕರಕರೆಯ–ಪರಿಹರಿಪುದು ತ್ವರಿಯಾ ॥ ಅಂಗಜಜನಕನ ನಂಗ ರಹಿತ ಸತ್ಸಂಗ ಕೃಪಾಬ್ಧಿ, ವಿಹಂಗವಾಹನನೇ ॥ ಗಂ ॥ ಪಲ್ಲ ॥ ಸ್ವಾಮಿ ಲಾಲಿಸು ಯನ್ನಯ ಮನದುಸರ–ನೀನಲ್ಲದಿತರರ–ಭೂಮಿಯೊಳ್ಕಾಣೆನೋ ಉದ್ಧರಿಸುವರ। ನವನೀತಚೋರ ॥ ಸಾಮಜ, ದ್ರೌಪದಿ, ಆ ಮುಚುಕುಂದ ಸುಧಾಮರಪೊರೆದ ತ್ರಿಧಾಮ ಮಹಾತ್ಮ ॥ ೧ ॥ ವಾಸುಕೀಶಯನ–ದಯಾ ಸಂಪನ್ನ ನಾರಾಯಣ ನಿನ್ನ–ದಾಸರೊಳಗಾಡಿಸೊ–ಸದ್ಗುಣಪೂರ್ಣ, ಸಾರ್ವರಿಗೆ ಪ್ರಸನ್ನ ॥ ಈಸಲಾರೆ ಈ ಸಂಸಾರ ಶರಧಿ ಕೃಸೋತಿತ್ತಲೋ ಪರಾಶರ

ತನಯ ॥ ೨ ॥ ನಿತ್ಯಾನಂದ ನಿಗಮೋದ್ಧಾರ, ಪೂತನೀ ಸಂಹಾರ–ಮೃತ್ಯುಂಜಯಸಖ ರವಿದರ ಗದಧಾರ । ಸುಖಪಾರಾವಾರ ॥ ಭೃತ್ಯವತ್ಸಲ ಸುರೋತ್ತಮ ಪಾರ್ಥನ ತೂತ್ತಿಗನಾದಿ ಸು । ಸತ್ಯಸಂಕಲ್ಪ ॥ ಗಂಗಾ ॥ ೩ ॥ ಮಂದರಾಚಲ ಧರಿಸಿದ ಗೋವಿಂದ । ಶ್ರೀಯಶೋದಾನಂದ–ನಂದನ, ಶ್ರೀಕೇಶವ ಮುಕುಂದ, ವಾಮನ ಸುಖಸಾಂದ್ರ ॥ ತಂದೆ, ಸಲಹೊ ನಿನ್ನ ಬಂಧಕ ಶಕುತಿಯಲಿಂದದಣಿಸದೆ ಅರಿಂದಮ, ಪ್ರಭುವೇ ॥ ೪ ॥ ಅಂತರಂಗವಬಲ್ಲ ಮಧುದ್ವೇಷಿ–ಯನ್ನಯ ಮನದಾಸೀ–ಅಂತು ಪೂರ್ತಿಸಿ ದುಷ್ಕರ್ಮದರಾಶಿ । ಉಳಿಸದ ಪರಿಹರಿಸಿ ॥ ಸಂತತ ಹೃದಯದಿನಿಂತು ಪೂಳೆವುದೋ ಅನಂತ, ಮುರಾಂತಕ ಚಿಂತಾರಹಿತನೆ ॥ ಗಂಗಾ ॥ ೫ ॥ ಶಕ್ರ-ವರಜಪೂಜಿತ ಬಲವಂತ-ರುಕ್ಮಿಣೀಪತಿ, ದಂತವಕ್ತ್ರಾರಿಬಾಧಿಸದಂತೆ ಕೃತಾಂತ । ಮೂಳ್ಪುದು ಕೆಡದಂಥ ॥ ಸುಕೃತಪಿಡಿಸೋ ತ್ರಿವಿಕ್ರಮ ಮೂರುತಿ ಶುಕ್ರಯುಕ್ತಿಹರ, ಅಕ್ರೂರ ವರದ ॥ ೬ ॥ ಕಂಕಾನುಜ ನುಂದಿರ ಪ್ರಾಣೇಶವಿಠಲ, ಗೋಕುಲ ಗೋಪಾಲ । ಪಂಕಜಾಸನಜನಕ ಶಕಟ ಕಾಲ–ಜಾಂಬವತೀ ಲೋಲ ॥ ಶಂಕರಾದ್ಯಮರರ ಕಳಂಕೆಣಿಸದ ಗರುಡಾಂಕ ಉರಗಪರ್ಯಂಕ ಸುಖಾತ್ಮ ॥ ೭ ॥

೯೪. ರಾಗ–ಕಾಂಬೋಧಿ (ತಾಳ ಅಟ್ಟ) [ಶ್ರೀ ಪಾಂಡುರಂಗ ಸ್ತುತಿ].

ರಕ್ಷಿಸೆನ್ನನು ಶ್ರೀ ಪಂಡರೀನಾಥಾ– ದೀನಜನದಾತ–ವಿಶ್ವ–ಕುಕ್ಷಿ, ವಿಖ್ಯಾತಾ ॥ ಪಲ್ಲ ॥ ಶ್ಲೋಕ ॥ ಧರ್ಮವನನಧರ । ವಿಷ್ಣು ಸೌಂದರ್ಯಸಾರ, ಧರ್ಮ ಪ್ರಮುಖ ವೀರವಂದ್ಯ ಲೋಕೈಕಧೀರ ॥ ಕರ್ಮವಿತತ ನಾರಾಯಣನೆ ಸುಖಪಾರಾವಾರ । ನಿರ್ಮಲದಧಿಚೋರ । ವಾರಿದನಿಭಾಂಗ ಜಾರಾ ॥ ೧ ॥ ಪದ ॥ ಮಾ-ಕಾ-ವೀ-ಫಣಿ, ಫಣಿಧರನುತ ದಿವ್ಯಚರಿತ । ವೃಂದಾರಕವೃಂದನಾಥಾ– । ನೇಕತಾಪಸರಿಗೆ ಸುಳಿಯೆಯಲ್ಲ–ತ್ವರಿಯ ಈ ಗೊಲ್ಲರಿಗೊಲಿದೆಯೊ ಸತ್ಯಾನಲ್ಲ । ಬೇಕಂದು ಶ್ರೀ ದೇವಕಿಯ ಪೊಟ್ಟೆಯಲ್ಲಿ ನೀ ಪುಟ್ಟ । ವೃಂದಾವನಕಾಗಿ ಅಟ್ಟಸಿಕೊಂಡು ನಂದನ ಮನೆಯಲ್ಲಿ । ಕ್ಷೀರಘೃತ ಚೆಲ್ಲಿ–ಮೆದ್ದೆ ಪರಿಪರಿಯಲ್ಲಿ ॥ ೨ ॥ ಶ್ಲೋಕ ॥ ಮೀನ ಕಮಠ ಕೋಲ, ಮರ್ತ್ಯಮೃಗರೂಪ, ಬಾಲ । ಕ್ಷೋಣಿಪಹ, ಸುಶೀಲ-ವೇಣು

ಈ ಮಾತುಗಳು ಸಲ್ಲವು– ಇನಿತ್ಯಾಕೆ ಕಾಮ–ಕಮಲಜರ–ಆಣೆ ॥ ನಾ ಮರಳಿ ಬಾರದಿರಲು, ಅತ್ಯಂತ–ಪ್ರೇಮ ನಿಮ್ಮೊಳು ನಿಲ್ಲೆನೇ ॥ ೧೪ ॥ ಸೃಷ್ಟಿಸಿ ಪೊರೆದು ಜಗವನು–ಮರಳಿ ಅದನಷ್ಟೂ ಸಂಹರವಮಾಡುತ । ತುಷ್ಟಿಬಡು ವೆಲೊಬಕಾರಿ, ಈಗ ನೀನಿಟ್ಟುಕೊಂಡಾಣೆ ನಿಜವೋ ॥ ೧೫ ॥ ಪಾದಸೇವಕರೋ ನಾವು– ಇನ್ನೊಂದು ಭೇದ ಬೆರಸಲಿಬೇಡವೋ । ಶ್ರೀದ ಪ್ರಾಣೇಶ ವಿಠಲ–ಕೈಯ ಬಿಡ–ದಾದರದಿ ಎಮ್ಮ ಸಲಹೋ ॥ ೧೬ ॥

೧೪೮. ರಾಗ–ಸುರಟ (ಅಟತಾಳ).

ಹೀಗೇವೇ ಪ್ರೀತಿ ಹೀಗೇವೇ ॥ ಆಗ ಬಹುಬಗೆಯಲಿ ಒಲಿಸಿ । ಈಗೆಲ್ಲರನು ಜರಿದುಪೋವೆ ॥ ಪಲ್ಲ ॥ ಚಕ್ರಿಯೆಮ್ಮ ಕೂಡಿಹ್ಯದಕೆ । ವಕ್ರನಾಗಿ ಅಗಲಿಸಿ ಪೊಯ್ವ । ಶುಕ್ರಶಿಷ್ಯ ಧಿಟವೋ ಇವನ–ಅಕ್ರೂರನೆಂದು ನಂಬಿದಲ್ಲೊ ॥ ೧ ॥ ಧನ ಮನೆ ಪತಿಸುತರ ಬಿಟ್ಟು, ಮನಸು ನಿನ್ನ ಪದದಲಿಟ್ಟು । ಕ್ಷಣವಗಲದ ಸುದತಿಯರೊಳು । ಘನತೆ ಬಹಳ ಕಂಡಿಕಂಡಿ ॥ ೨ ॥ ಒಲ್ಲೆನೆಂದರೆ ಪೋಪನವನು । ಸೊಲ್ಲಿಸದಲೆ ನಡೆದೆಯಲ್ಲೊ ॥ ಅಲ್ಲಿಹ ಸ್ತ್ರೀಯರ–ಮಾಟವೇನೋ–ಬಲ್ಲೆವೆ ಇದು ಪ್ರಾಣೇಶವಿಠಲ ॥ ೩ ॥

೧೪೯. ರಾಗ–ಮೋಹನಕಲ್ಯಾಣಿ (ಅಟತಾಳ).

ಪಾಹಿ ಕೃಷ್ಣಾ ನಮ್ಮನ್ನೀವೂರೊಳಗೆ ಬಿಟ್ಟು ನೀ ಹೋಗದಿರು ಕಂಡ್ಯಾ ಮಧುರೆಗೆ ॥ ಪಾಹಿ ಕೃಷ್ಣ ರಮಾಪತೇ ॥ ಪಲ್ಲ ॥ ಬಾಲತನದಂಲಿದ ನಿನ್ನ ಹೊಂದಿದ್ದೆವೊ । ಕೀಳನುಡಿಗಳೊಂದಾಡಿದ್ದವೇ ॥ ಪಾಹಿ ॥ ತಾಳಲಾರೆವೊ ಕಾಮನಟ್ಟುಳಿ ನೀ ಹೋದಮೇಲೆ, ದಯವಮಾಡಿ ನಿಲ್ಲದೊ ॥ ಪಾಹಿ ॥ ೧ ॥ ಏನು ಕಾರಣವುಂಟು ಪೋಗಲಿಕ್ಕಲ್ಲಿಗೆ । ಶ್ರೀನಿವಾಸನೆ ಹೇಳೋ ಮಾಜದೇ ॥ ಪಾಹಿ ॥ ದಾನವಾಂತಕ ನಿಮ್ಮ ತಂದೆತಾಯಿಯಣ್ಣ–ಹೀನಮಾತುಗಳು ಆಡಿದರೇನೋ ॥ ಪಾಹಿ ॥ ೨ ॥ ಆಕಳ ಕಾಯ್ವದು ಬೇಸರವಾಯಿತೊ, ಸಾಕಲಾರೆಯೋ ನಮ್ಮನೆಲ್ಲರೊ ॥ ಪಾಹಿ ॥ ಗೋಕುಲದೊಳು ಪರರಾಯರಂಜಿಕೆಯಿಲ್ಲ ಯಾಕೆ ಇಲ್ಲಿಂದ ನೀ ತೆರಳುವೀ ॥ ಪಾಹಿ ॥ ೩ ॥ ಜಾರತನವಮಾಡು

ತಿಹನು ಕೇಶವನೆಂದು । ದೂರುವರಾರೋ ಈ ಪುರದೊಳು ॥ ಪಾಹಿ ॥ ತೋರು ಅವರ ಈಕ್ಷಣಕೆ ಪೋಗಿ ಗಂಟಲಿಘಾರಿ ಕಲಹಮಾಡಿ ಬರುವೆವೋ ॥ ೪ ॥ ನಮ್ಮ ಮನೆಯೊಳು ಪಾಲು ಬೆಣ್ಣೆಯು ಕದಿಯಲು ನಿಮ್ಮೊಮ್ಮನಲ್ಲಿ ದೂರಿದೆವೇನೋ ॥ ಪಾಹಿ ॥ ಸುಮ್ಮನೊಂದಿವಸ, ಪೇಳಿದ್ದೆವೊ– । ಇಲ್ಲವೋ ಯಮ್ಮಪರಾಧಕ್ಷಮೆಯು ಮಾಡೋ ॥ ಪಾಹಿ ॥ ೫ ॥ ನಿನ್ನ ಸಂಗವಮಾಡಿ ದಿವ್ಯವಸನ ವಸ್ತ್ರವನ್ನು ಅಪೇಕ್ಷಮಾಡಿದೆವೇನೋ ॥ ಪಾಹಿ ॥ ಹೆಣ್ಣುಕುಲವು ಪುರುಷರ ಕಾಡುತಿಹರಂತೆ ಅನಂತ ನಾವು ಅಂಧವರಲ್ಲೋ ॥ ಪಾಹಿ ॥ ೬ ॥ ಜಗದೀಶ ನಿನ್ನಲ್ಲಿ ಮನವಿಟ್ಟು ಮನೆಯಲ್ಲಿ ಮಗುವು ಗಳಳುತಿರೆ ಕರೆಯೆವೊ ॥ ಪಾಹಿ ॥ ಒಗತನವನುಬಿಟ್ಟು ಗಂಡರಿಗಂಜದೆ ನಗಲುಜನರು ನಾಚ ದಿದ್ದೆವೊ ॥ ೭ ॥ ಚಿತ್ತಜಜನಕನ ಸಂಪಾದಿಸಿದರೆಂದು ಅತ್ತೆಅತ್ತಿಗೆ ಯೆಮ್ಮ ಬೈಯ್ಯುರೋ ॥ ಪಾಹಿ ॥ ಹೆತ್ತವರೂರಿಗೆ ಪೋದವೀಸುದ್ದಿಯು ಉತ್ತಮುತನೆ ಪೀಗೆ ಕಡಿಸೋದು ॥ ಪಾಹಿ ॥ ೮ ॥ ಆರಂದು ಯೇನುಮಾಡುವರು– ಯಮಗೆ ಬಲ–ಮಾರಮಣನ ಹಾಸೆಎಂಬುವ್ಯೊ ॥ ಪಾಹಿ ॥ ನೀರಜಾಂಬಕ ಈಗ ನೀ ಬಿಟ್ಟು ಪೋಗಲು । ಪೋರೆದೋರುವಹ್ಯಾಂಗ ಜನರಿಗೆ ॥ ಪಾಹಿ ॥ ೯ ॥ ಆಳುವ ಪುರುಷರು ಯಮ್ಮ ಗುಣವಕಂಡು ಕಾಲಿಗ ನೀರನೇ ಕೊಳ್ಪರೋ ॥ ಪಾಹಿ ॥ ನೀಲಮೇಘಃ ಶ್ಯಾಮನ ಕರುಣವೇ ಸಾಕು ಕೇಳೆವು ನಿಮ್ಮ ಸಿಟ್ಟುಎಂಬೆವೊ ॥ ಪಾಹಿ ॥ ೧೦ ॥ ಹಾಸಿಕಿಯಲಿ ಮಲಗಲು ನಿದ್ರಿಬಾರದು । ಶ್ರೀಶ ನಿನ್ನನ್ನೇ ನನಸುತಿಹೆವೊ ॥ ಪಾಹಿ ॥ ವಾಸುಕಿಶಯನ ಪೋಗ ಬೇಕಾದರೆ ನಮ್ಮ ದೋಷವುಡಿಗೇಗಟ್ಟ ನೀ ನಡಿ ॥ ಪಾಹಿ ॥ ೧೧ ॥ ವನದೊಳಗಂದು ನೀ ಕೊಳಲನೂದಲು ಕೇಳಿ, ತನುವಮರೆದು ಓಡಿಬಂದೆವೋ ॥ ಪಾಹಿ ॥ ವನಿತೆಯರೆಲ್ಲ ಸೀರೆಗಳ ತಲೆಗೆ ಸುತ್ತಿ ಮಣಿಹಾರಾವಳಿಯು ಕಾಲಗೆ ಕಟ್ಟ ॥ ಪಾಹಿ ॥ ೧೨ ॥ ಎಣ್ಣೆಯು ಹಚ್ಚಿಕೊಂಡವರು ಉಂಬುವರೆಲ್ಲ ಉಣ್ಣದೆಂಜಲಗ್ಯೆಲೆ ಎದ್ದೆವೋ ॥ ಪಾಹಿ ॥ ಸಣ್ಣವರೆಂದು ವತ್ಸಗಳನೆತ್ತಿದೆವೋ ಪ್ರಪನ್ನವತ್ಸಲ ನಗೆಗೇಡಿದು ॥ ಪಾಹಿ ॥ ೧೩ ॥ ಶೋಕನಾಶನ ಇಲ್ಲೇ ಇದ್ದರೆ ಈ ಮಾತು ಯಾಕೆ ನೆನಿಸಿಕೊಂಡು ಬಳಲೆವೊ ॥ ಪಾಹಿ ॥ ಬೇಕು ಇಂದಿರೆಯರಸನ ಸ್ನೇಹಯುಮಗೆಂದು । ಕಾಕುಲಾತಿಯಲಿ ಮಾಡಿದೆವೆಲ್ಲೊ

॥ ಪಾಹಿ ॥ ೧೪ ॥ ಎಂದಿಗಾದರು ನನ್ಮ ಕರವಬಿಟ್ಟಗಲ ಗೋವಿಂದನೆಂದರಿದಿದ್ದೆವನಿರುದ್ಧಾ ॥ ಪಾಹಿ ॥ ಸಿಂಧುಬತ್ತಲು ಜಲಜಂತುಬಳಲುವಂತೆ, ಇಂದಿಗೆಮಗೆ ತೋರುತಿಹದೋ ॥ ಪಾಹಿ ॥ ೧೫ ॥ ಎಲ್ಲಿಂದ ಬಂದನು ಅಕ್ರೂರನೆಂಬವ ಫುಲ್ಲನಾಭನೆ ನಿನ್ನ ಕರೆಯಲು ॥ ಪಾಹಿ ॥ ಇಲ್ಲಿಂತು ಸ್ತ್ರೀಯರ ಬಿಟ್ಟು ಬಾಹುವದೆಂತು ಅಲ್ಲಿಗೆಂದಿವನು ತಿಳಿಯಲಿಲ್ಲೇ ॥ ಪಾಹಿ ॥ ೧೬ ॥ ಕ್ರೂರನೇಸರಿ ಈ ವ್ಯಾಲಿನಾಮುವಿವನಿಗೆ ಆರು ಕೊಟ್ಟರೋ ಕಾಣ್ಯೊ ತಿಳಿಯುದೂ ॥ ಪಾಹಿ ॥ ನಾರಾಯಣನೆ ಅಪ್ಪಣೆಯಕೊಡು ಪೋಗಲಿ ದಾರಿ ಹಿಡದು ತಮ್ಮ ಊರಿಗೆ ॥ ಪಾಹಿ ॥ ೧೭ ॥ ಒಂದು ದಿವಸ ನಕ್ಕು ನಡಿದವರಿಳೆಯೊಳು ಇಂದುಮುಖಿಯರ ಜರಿವದಿಲ್ಲ ॥ ಪಾಹಿ ॥ ಮಂದರಧರ ಬಹುಕಾಲ ನಿನ್ನಯ ಪಾದ ಹೊಂದಿಕೊಂಡವರೋ ಮರೆಯಬೇಡೋ ॥ ಪಾ ॥ ೧೮ ॥ ಮಥುರಾಪುರಕೆ ಹೋದಬಳಿಕ ಬಾಹುವದೆಂತು, ಚದುರಸ್ತ್ರೀಯರು ಅಲ್ಲಿ ಬಹುಮಂದಿ ॥ ಪಾಹಿ ॥ ಮದನಬಾಣದಲಿ ಜರ್ಝರಿತರಾಗುತ ನಿನ್ನ ಬದಿಯಲ್ಲಿ ಬಂದು ರಮಿಸುವರೋ ॥ ಪಾಹಿ ॥ ೧೯ ॥ ಪರಿಮಳವಸ್ತ್ರವನೇಕ ಭೂಷಣದಿಂದ । ಪರಮಾತ್ಮ ನಿನ್ನಾರಾಧಿಸುವರೋ ॥ ಪಾಹಿ ॥ ಸುರನದೀ ಪಿತನೆ ಆ ಸುಖದ ಸಾಗರದೊಳು । ಪರವೆ ಗೊಲ್ಲರ ಹೆಂಗಸರದೆಲ್ಲ ॥ ಪಾಹಿ ॥ ೨೦ ॥ ಚಿಂತೆಬ್ಯೇಡಿರಿ ಬರುತಿಹೆನೆಂದು ಹೇಳಿಯೊ-ಇಂತಿದ್ದ ಬಳಿಕ ನೀ ಬಾಹುವ್ಯಾ ॥ ಪಾಹಿ ॥ ಎಂತೆಂತು ಶೃಂಗಾರಮಾಡಿ ತೋರಿಸುವರೊ । ಅಂಥ ಜಾಣೆಯರು ಇಲ್ಲ್ಯಾರುಂಟು ॥ ಪಾಹಿ ॥ ೨೧ ॥ ನಂಬಿದವರ ಭ್ರಷ್ಟಮಾಡುವದುಚಿತವೆ ಅಂಬುಧಿಶಯನ ಅಧೋಕ್ಷಜಾ ॥ ಪಾಹಿ ॥ ಕಂಭದಿಂದುದ್ಭವಿಸಿದ ನರಹರಿ ನಿನ್ನ ಹಂಬಲದಲಿ ಹೊತ್ತು ಹೋಗದೊ ॥ ಪಾಹಿ ॥ ೨೨ ॥ ಧರೆಯೊಳು ಸಣ್ಣ ಧೊರೆತನಮಾಡುವರು ದೀನರ ಪೋಷಣೆಯ ಮಾಡುತಿಹರಲ್ಲೊ ॥ ಪಾಹಿ ॥ ಸುರವಂದ್ಯ ಈರೇಳು ಭುವನವಾಳುವದ್ಯಾಕೋ ಮೊರೆಯಿಡುವರನ ರಕ್ಷಿಸದಲೆ ॥ ಪಾಹಿ ॥ ೨೩ ॥ ಬದುಕುವದೆಂತು, ನೀ ಪೋದಬಳಿಕ ಇಲ್ಲೀ-ಸುದತಿಯರೆಂದು ತಿಳಿಯದೇನೋ ॥ ಪಾಹಿ ॥ ಮಧುರಿಪು ಕರುಣಾಸಾಗರನೆಂದು ಬಹುವೇದವೊದರುತಿಹ್ಯವು ಸತ್ಯವಲ್ಲೇನೋ ॥ ಪಾಹಿ ॥ ೨೪ ॥ ನೊಣವೊರಸಲುಪಾಪ, ಹೊಂದಿಕೊಂಡಗಣಿತ । ಂಗನಿಯರ ಕೊಂದರೆ ಒಳಿ

ತೇನೋ ॥ ಪಾಹಿ ॥ ದಿನಕರ ಶತತೇಜ ನಿನ್ನಗಲಿದಮೇಲೆ । ಕ್ಷಣಜೀವಿಸುವರೆಂದು ತಿಳದಿದ್ದ್ಯಾ ॥ ಪಾಹಿ ॥ ೨೫ ॥ ರಕ್ಕುಭಕ್ತಿಯ ಮಾಡುತಿದ್ದವೆ ನಿನ್ನೊಳು–ರಕ್ಕಸರಿಪು ಮನಸರಿಯೆನೋ ॥ ಪಾಹಿ ॥ ಇಕ್ಕೊಳ್ಳೊ ಈ ದೇಹ ನಿನಗೇ ಒಪ್ಪಿತೊ ದೇವ । ಮಕ್ಕಳಾಣೆಯೊ ಎರವಿಲ್ಲವೋ ॥ ಪಾಹಿ ॥ ೨೬ ॥ ವಾಸುದೇವನ ಖೀಗೆ ಮುಖಭಂಗಮಾಡೊದು । ಏಸು ಜನ್ಮದ ಹರಕೆಯು ಯಿತ್ತೋ ॥ ಪಾಹಿ ॥ ಲೇಸು ಮೊದಲಿಗೆ ಸ್ನೇಹವ ಮಾಡದಿದ್ದರಾಭಾಸಕಂಜೆಲೋ ನಂದನಂದನ ॥ ಪಾಹಿ ॥ ೨೭ ॥ ಕೂಳು ಹುಟ್ಟದೆ ಹೋಗಿ ನಿನ್ನ ಸೇರಿದೆವೇ । ಗೋಪಾಲ, ಅಂದಿಷ್ಟು ಬೆಳ್ಳಿಸುವೆಲ್ಲ್ಯೋ ॥ ಪಾಹಿ ॥ ಆಲಯದೊಳಗಿರೆ ಬೀದಿಯೊಳ್ ಬರುತಿರೆ ವಾಲಯ ಬೆನ್‌ಬಿಡದಿರುವೆಲ್ಲೊ ॥ ಪಾಹಿ ॥ ॥ ೨೮ ॥ ಈಸೊಂದು ಮಾತುಗಳ್ಯಾತಕಾಡುವ ಶ್ರೀಪ್ರಾಣೇಶವಿಠಲ ಕೃಪಾಸಾಗರ ॥ ಪಾಹಿ ॥ ದಾಸೆರೊಯನ್ನುನುದಾಸೀನಮಾಡದೆ ದೋಷರಹಿತ ವೈಣ ನಿಲ್ಲಿನೋ ॥ ಪಾಹಿ ॥ ೨೯ ॥

೧೫೦. ರಾಗ–ಪೂರ್ವಿ (ಏಕತಾಳ).

ಇಲ್ಲೇ ಇದ್ದೇನೆಂದು ತಿಳದಿರಲಿ–ನಾ ಎಲ್ಲಿಗೆ ಹೋದರದೆಲ್ಲ ಬಯಲ ಮಾತೆ ॥ ಪಲ್ಲ ॥ ಸಿರಿಯಿಂದಲತಿಶಯ ಬೆರೆದಿಹೆ ನಿಮ್ಮೊಳು । ಎರವಿಲ್ಲ ಲೇಶತ ಸ್ಮರನಾಣೆ ನಾ ॥ ಇಲ್ಲೇ ॥ ೧ ॥ ಮಧುರಾ ಪಟ್ಟಣದೊಳು ಚದುರೆರಿದ್ದರವರ । ಬದಿಯಲ್ಲಿ ಹೋದರೆ ವಿಧಿಯಾಣೆ, ನಾ । ನಿಲ್ಲೇ ಇದ್ದೇನೆಂದು ॥ ೨ ॥ ಇಂದುಮುಖಿಯರೆ ನಿಮ್ಮಂದವಕೆಡಿಸಿ ನಾ ತಂದೆತಾಯಿಗಳನು, ಹೊಂದಿಹೆನೇನಾ ॥ ೩ ॥ ನಂಬಿದವರ ಮನದ ಹಂಬಲರಿಯೆ ದಯ ಅಂಬುಧಿ ಹರಿ ಎನಗಂಬುವರೆ ॥ ೪ ॥ ಕ್ರೂರನಕಾಟಕೆ ಆರಾದೆ ಪೋಗುವೆ, ಗಾರಾಗಬೇಡಿರೆ ನಾರಿಯರೇ ನಾ ॥ ೫ ॥ ಬಿಟ್ಟರೆ ನಿಮ್ಮನು ಹುಟ್ಟೊ ಜನ್ಮಕೆ ಗೇಣು । ಬಟ್ಟೆಯೆಂಬುದೆನಘುಟ್ಟಬೇಡ ನಾ ॥ ೬ ॥ ತನುಮನಿಸುತ ಪತಿಯನು ಬಿಟ್ಟುಯನ್ನಲ್ಲಿ । ಘನಸ್ನೇಹವೆಂಬದೀ ಮನಕಿಲ್ಲೇ ನಾ ॥ ೭ ॥ ತ್ವರಿತೆನ್ನ ನಿಮ್ಮಲ್ಲೆರ ಗಾದೆಯಿದ್ದರೆ, । ತರುಣೆರೆ ನಿಮ್ಮನಸೆರಗುವದೆ ॥ ೮ ॥ ಮಾನಿನೀಯರೆ ನಿಮ್ಮ ನಾನಗಲಿದರೆ, ಪ್ರಾಣೇಶವಿಠಲನೆಂಬೀ ನಾಮ್ಯಾಕೆ ॥ ನಾ ಇಲ್ಲೇ ಇದ್ದೇ ॥ ೯ ॥

೧೫೧. ರಾಗ—ಪಂತುವರಾಳಿ (ಅಟತಾಳ).

ಹೆಂಡತಿಕಿಂತೆಮ್ಮ ಹೆಚ್ಚು ನೋಡಿದೆನೆಂದು, ಕಂಡಂತೆಯಾಡಿದ್ದೆಲ್ಲೋ॥ ಪುಂಡರೀಕಾಕ್ಷ ಒಂದಾಣೆಲ ನಿನಗೆ ಇತ್ತಂಡ ವಿಚಾರಮಾಡೋ ಮಾತಾಡೋ ॥ ಪಲ್ಲ ॥ ಅಧಮರು ಸೇವಿಸಿ ಬದುಕುವೆವೆಂದರೆ ಪಾದ । ಪದುಮವು ದೊರಕವಲ್ಲೊ । ಉದಧಿಜೆ ಸ್ವಲ್ಪ ನಡೆದರೆ ಸೋಲುವಳೆಂದು ಎದೆಯಲ್ಲಿ ಪೊತ್ತೆಯಲ್ಲೊ—ಒಂದಲ್ಲೊ ॥ ೧ ॥ ಕಳೆಯುಗುಂದಿಸಿದ್ಯೊ ತೆರಳುವೆ ಮಧುರೆಗೆಂದು ಜಲಪಾನ ತೊರಿಸಿದ್ಯೆಲ್ಲೋ ॥ ಚಲುವಿಕೆ ಪ್ರಾಯ ಶ್ರೀಲಲನೆಗಿಹ್ಯದಕೆ ಮಕ್ಕಳ ನೀನೇ ಪಡದೆಯಲ್ಲೊ—ಸುಳ್ಳಲ್ಲೋ ॥ ೨ ॥ ಗಂಡೊಲ್ಲದವಳನ ಗುಂಡೊಲ್ಲದಂತೆ ಭೂ—ಮಂಡಲದೊಳಗೀವರಿ ॥ ಭಂಡು ನೀ ಮಾಡಲು ಕಂಡರೆ ನಮ್ಮನು ಪಂಡಿತಪಾಮರರೂ—ನಗುವರು ॥ ೩ ॥ ಹಲವು ಬಗೆಯಲಿ ನೀವಲಿದ ಕಾರಣದಿಂದ ಬಲು ಭಕುತಿಯಲಿ ನಿತ್ಯಾ । ತಿಲಮಾತ್ರ ಬಿಡದೆ ಕಮಲೆಪಾದ ವಿಧಿ ಶಿವ ಕುಲಿಶಧರಾಮರರೂ ಸೇವಿಪರು ॥ ೪ ॥ ನೀನಗಲಿದರೆ ಇನ್ನೇನು ನಿರ್ಭಾಗ್ಯರು । ದೀನಾರು ಯಮಗಾವೀಗೆ॥ ಎಣಿಸಿನೋಡಲು ಕಾಣೆವ್ಯೋ ಸಮಸುಖ ಪ್ರಾಣೇಶವಿಠಲ ಕೇಳು ॥ ದಯಾಳು ॥ ೫ ॥

೧೫೨. ರಾಗ—ಪೂರ್ವಿ (ಏಕತಾಳ).

ಪಾಲಿಸಿರೆಪ್ಪಣೆ ಮಧುರಿಗೀಗಲು । ತಿಲಾಂಶ ಚಿಂತಿಸಬೇಡಿರೆಲೆ ॥ ಪಲ್ಲ ॥ ನಾರಿಯರೆ ನಾನೆಲ್ಲಿ ಪೋಗುವೆ ಕೋಮಲ ॥ ಮೋರಿಯ ಬಾಡಿಸಬೇಡಿರೆಲೆ ॥ ೧ ॥ ಯಾತರಗೋಸುಗ ಖಿನ್ನರಾಗುವಿರೆನ್ನ ॥ ಮಾತು ಮನಸಿಗ ತನ್ನಿರೆಲೆ ॥ ೨ ॥ ಕಂಧರ ಉಬ್ಬಿ ದ್ವಂಯಕಂಗಳುದಕ ಪೊತ್ತಿ ॥ ಮಂದಮತಿಗಳ್ಯಾಕಾದಿರೆಲೆ ॥ ೩ ॥ ದೊಡ್ಡ ಕಾರ್ಯಕ್ಕೆ ಹೋಗುವೆನೀಗ ಈ ಪರಿ ॥ ಅಡ್ಡಾಗಬಾರದು ಕೇಳಿರೆಲೆ ॥ ೪ ॥ ಬಲುದೂರ ಬಂದರೆ ಜವ ಬಾಹೋಣಾಗದು ॥ ತಿಳಿದು ಮನೆಗೆ ದಯಮಾಡಿರೆಲೆ ॥ ೫ ॥ ತ್ವರದಿಂದ ವೈರಿಯಗೆಲಿದಿಲ್ಲಿ ಬಹದೆಂದು ॥ ತಿಳಿದು ಮನೆಗೆ ದಯಮಾಡಿರೆಲೆ ॥ ೬ ॥ ಪ್ರಾಣೇಶವಿಠಲನೆಂದಾಕ್ಷಣ ತಡಿಯದೆ ॥ ನಾನಿಮ್ಮಲ್ಲಿಹನೆಂದು ತಿಳಿಯಿರೆಲೇ ॥ ೭ ॥

### ೧೫೩. ಪದ, ರಾಗ–ಶಂಕರಾಭರಣ (ಅಟತಾಳ).

ಏನೂಘೇಸಿಸಿದ್ದೇನಕ್ಕಾ । ನಾ ನನ್ನ ಮನದೊಳೀಗಾ ॥ ಮಾನಿನಿ ತಿಳಿದು ಪೇಳಿಲೆ । ಹೀಗಾದರೀಕೊ । ಜಾಣೇನೀನೆಯೆ ಅಹುದೆಲೆ ॥ ಪಲ್ಲಾ ॥ ಅಂಬುಜಾಕ್ಷಿ ಕೇಳಿದ್ಯಾಪೀ । ತುಂಬರಾ ಬಂದಾನೆ ಎಂಬೋ । ಹಂಬಾಲಲ್ಲಾದೆ ಬ್ಯಾರ್ಯಂಟನೇ ॥ ತೋರುವದಿಂತು । ಜಂಭಾದ ಮಾತಲ್ಲೆ ಸುಳ್ಳೇನೇ ॥ ೧ ॥ ಸತ್ಯ ಹೇಳಿದ್ದಲ್ಲೆ ಎಂಥಾ । ಉತ್ತ್ಮಾಮಳೆ ಬಂದಾನೇನೆ । ಸತ್ಯಾ ಭಾಮಿರಮಣ ಇಲ್ಲಿಗೇ ॥ ನಿಮಿಷಾಯುಗ । ಹತ್ತಾಗಿ ತೋರುವದೆಮಗೆ ॥ ೨ ॥ ಎಲ್ಲಾರಾವೇಕ್ಷವು ಆವಾ । ನಲ್ಲೇ ಅಂಬೋದಕ್ಕೆ ಅಂದೀ । ನಲ್ಲಾದೆ ನೋಟಾಗಾರತೇನೇ ॥ ಬಂದಾನೊಬರದೆ ಅಲ್ಲೆ ಈಹನೂ ಬಲ್ಲೀನೇನೇ ॥ ೩ ॥ ಜೋಗಿಣಿ ಮನೆ ತನಕಾ, । ಹೋಗಿ ಕೇಳುವ ಬಾರೆಲೇ । ನಾಗಾರಿ ವಾಹನ ಬಾಹೋದೂ । ಲಕ್ಕೀಶಾನವಿಯೋಗಾದಿ ಮನಸು ನಿಲ್ಲಾದೂ ॥ ೪ ॥ ಮಳೆನೀರೂ ಬಿಟ್ಟು ಮುಂಜುಗಳಿಗೆ ಕೈನಡ್ಡುವಂತೆ । ನೀಲಾಂಗನ ಬಿಟ್ಟು ಯೋಚನೇ ॥ ಮಾಡುವೆವೇನು । ಬಾಳೀವ್ಯಾಯಿತೇ ಕೀರವಾಣೀ ॥ ೫ ॥ ಹೋಗದಾ ಮುಂದೇಯೆ ಪ್ರೀತಿ ನೀಗದ ಮುಂದೆಯೆ ಜೋಕಿ । ಈಗಳಲೀದರೆ ನಾಹದೇ ॥ ತಕ್ಕಸಾಧನಾ । ನಾಗ ಗಮನೆವಂದೂ ತೋರದೇ ॥ ೬ ॥ ವಕ್ರನಾಗೀ ಬಂದೂ ನಮ್ಮಾ । ಚಕ್ರೀಯುಗಲೀಸಿದನು । ಶುಕ್ರಶಿಷ್ಯನೇ ಧಟವಮ್ಮಾ ॥ ತಿಳಿಯುದಲೆ । ಅಕ್ರೂರಸಂಬೊರಲ್ಲೆ ಕರ್ಮಾ ॥ ೭ ॥ ಆನರೀಗಂಬೂವದ್ಯಾಕೆ । ಆ ನಾರಿಯರಾ ಮಾಡಿದ್ದೂ । ಗೋಣು ಮುರಿದಾರೆ ನಮ್ಮನೂ ॥ ಸುಲಭದಿಂದೆ ಶ್ರೀನಿವಾನಾಕ್ಕೈನೇರಿದನೂ ॥ ೮ ॥ ತುಂಡಾಶಟ ನೇರಿಗೆ ತಮ್ಮಾ । ಗಂಡಸರಿದ್ದಿಲ್ಲವೇನೆ । ಪುಂಡರೀಕಾಕ್ಷನಾ ಬಯುಸಲೂ ॥ ಈವನು ಅಂಥಾ ಭಂಡಾನೆ ಅಲ್ಲೀಗೆ ಹೋಗಲೂ ॥ ೯ ॥ ಅನ್ನಾಲಂಕಾರ ಅಂಬರ । ವನ್ನು ನಾವೆಂತೂ ಜರಿದೆವೊ । ಘನ್ನಘಾತಕೇರು ನಮ್ಮಂತೆ ॥ ಆಗಲೇ ಸುಖವನ್ನು ಕಾಣಬೇಡವೆ ಕಾಂತೇ ॥ ೧೦ ॥ ಮೀನಾಕ್ಷೀರಾ ಕೂಡದಂತೆ । ತಾನು ಭ್ರಾಂತನಾಗಿ ನಮ್ಮಾ । ಧ್ಯಾನದಿಂಥೋಗಾದೆಯಲ್ಲೀಗೇ ॥ ಬಾರಲೆ ನಮ್ಮಾ । ಪ್ರಾಣೇಶ ವಿಠ್ಠಲನು ಇಲ್ಲಿಗೇ ॥ ೧೧ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೫೪. ಪದ, ರಾಗ–ವರಾಳಿ (ಅಟತಾಳ).

ತಾಳಲಾರಿನೆನೀರೆ ಕರತಾರೇ। ತಾಳಲಾರಿನೆನೀರೆ ಕರತಾರೆ ಹರಿಯಾ। ಕೇಳಿ ಯನ್ನಯ ಮಾತು, ನಡಿ ಈಗ ತ್ವರಿಯಾ॥ ನಾಳೆ ಬಾಹುವೆನೆಂದು ಬಹು ಬಹುಪರಿಯಾ। ಹೇಳೂವಬಿಡದಿರು ಮೂಲೋಕ ಧೊರಿಯಾ ॥ ಪಲ್ಲ॥ ನಾಕು ಮೊಗನ ಪಿತ ಶ್ರಿದೇವಿ ವರನಾ। ನಾಕಾರು ಕಂಧರ ದಸುರ ಸಂಹರನಾ॥ ನಾಕು ಹತ್ತು ಭೂವನುಳ್ಳ ಉದರನಾ। ನಾಕು ವೇದವ ಮುಂದರವನಿ ಉದ್ಧರನಾ॥ ೧॥ ಕುಸುಮ ಬಾಣನವೈರಿ ಶುಕಮುನಿ ಪಿತನಾ। ಕುಸುಮ ತಂದವನ, ತಮ್ಮಗೆ ಬಲುಹಿತನಾ॥ ಕುಸುಮಲೋಚನ ನಂದಗೋಪನ ಸುತನಾ। ಕುಸುಮದ ತರುಸತಿಗಿತ್ತ ಅಚ್ಯುತನಾ॥ ೨॥ ನಗ ಮುರಿದೆ ಮುಳರ ಶಾಪ ಕಳದನಾ। ನಗ ರಕ್ಷಿಸಿದವಗೆ ಬಹಳೊಲಿದವನಾ॥ ನಗ ಪೊತ್ತು ಗೋಕುಲ ಉಳಸಿಕೊಂಡವನಾ। ನಗ ಶತೃ ಅನುಜ ಪ್ರಾಣೇಶವಿಠ್ಠಲನಾ॥ ೩॥ ಶ್ರೀ ಮಧ್ವೇಶಾರ್ಪಣಮಸ್ತು॥

### ೧೫೫. ಪದ, ರಾಗ–ಪೂರ್ವಿ (ಅಟತಾಳ).

ಎಷ್ಟು ಹೇಳಿದರು ರಂಗಾ। ಬಿಟ್ಟುಹೋದಾ ನೋಡಿರೆಮ್ಮಾ। ಮೊಟ್ಟ ಮೊದಲಿಗೇ ತಿಳಿಯಾದೆ। ಕೃಷ್ಣನ ಸಂಗಮಾಡಿದೇವೆಮ್ಮಾ॥ ಪಲ್ಲ॥ ಅನ್ನಾ ಉದಕಾನಡಿಯೂವವ್ವಾ। ಕಣ್ಣುಮುಚ್ಚಾವು ಶಯನಾದೀ॥ ಬಣ್ಣಾದೊಸ್ತ್ರಾ ಭೂಷಣಗಾ। ಳನ್ನು ದೇಹಾಬಯುಸಾವವ್ವಾ॥ ೧॥ ಗಂಧಲೇಪನ್ಯಾತಕಮ್ಮಾ। ಮುಂದರ ಧರನಗಲೀದಾ॥ ವಂದು ನಿಮಿಷವು ಯುಗದಂತೆ। ಇಂದಿಲಿಂದಾ ತೋರುವದೆಮಗೇ॥ ೨॥ ಗಂಡರೂ ಬೈದಾರಲ್ಲವ್ವ। ಕಂಡವರೇ ನಂಬುವರೋ॥ ಪುಂಡರೀಕಾಕ್ಷನಾನೆಚ್ಚೀ। ಕೊಂಡು ಬೈಲಿಗೆ ಬಿದ್ದೆವಮ್ಮಾ॥ ೩॥ ಆರೂ ಕಂಡಿದ್ದಾರೊ ಆವಾ। ದಾರಿಲೇ ಹೋದಾನೊ ಕೃಷ್ಣಾ॥ ನಾರೇರು ನಾವೆಲ್ಲರು ಕೂಡೀ। ದೂರ ಹುಡುಕಿ ಬಾಹುವನಮ್ಮಾ॥ ೪॥ ಶ್ರೀಶಪ್ರಾಣೇಶವಿಠ್ಠಲ್ಲಾ। ಎಸೂಗಾವದವೂ ಹೋದಾರೂ॥ ಲೇಸೆ ಬೆನ್ನುಹತ್ತಿ ಹೋಗುವ। ದೋಷಾರಹಿತಾ ತಾನೇ ದೊರೆವಾ॥ ೫॥ ಶ್ರೀ ಮಧ್ವೇಶಾರ್ಪಣಮಸ್ತು॥

೧೫೬. ಪದ, ರಾಗ–ಸುರಟ (ಅಟತಾಳ).

ರಂಗ ಹೋದಾನಲ್ಲೆ ನಮ್ಮ । ನೊಂಚಿಸೀ ಮಾರಗೊಪ್ಪಿಸೀ । ಅಂಗನೆ ನಾವೆಂತು ಬದುಕೂವಾ ॥ ರಂಗ ಹೋದನಲ್ಲೆ ॥ ಪಲ್ಲ ॥ ಸಖಿನಮ್ಮಾ ಹಿರಿಯರೆಷ್ಟೊ, ಪುಣ್ಯ ಸಂಪಾದಿಸಿದ್ದಾರೊ । ಸುಖಬಟ್ಟೇವೆ ಇಷ್ಟು ದಿಂವಸಾಗಿ ಹೋದನಲ್ಲೆ ॥ ಧಿಕು ನಮ್ಮ ಪಾಪದಿಂದಾ ಶೋಕ ಬಡುವದು ಸದ್ಯಾ । ಲಕು ಮಿಾಶನಗಲಿ ಈಗಾ ॥ ೧ ॥ ಹಿಂದಿನ ಜನ್ಮದೊಳಾರಾ । ಕ್ರೀಡಿ ನಿಗ್ರಹಿಸಿದ್ದೆವೊ । ಮಂದರಾದ್ರಿಧರಯರವಾದಾ ॥ ಮುಂದೆ ವಂದುಪಾಯಾವಿಲ್ಲಾ ಹರಿಯಂ ದಾರನಕರವಾ । ಮಂದಿಗೆಂತು ಮೊಗದೋರೂವಾ ॥ ೨ ॥ ಅಕ್ಕ ಕೇಳೆ ಅಚ್ಯುತಾನು ನಿಮ್ಮೊಳಗೆಂತು ಯಿದ್ದಾನೊ । ಮಕ್ಕಳಾಣೆನಲ್ಲಿ ಮಾತ್ರಾ ॥ ದಕ್ಕಿದಂತಿದ್ದಾನಾನೊಂದಪೇಕ್ಷ ಮಾಡಿದವಳಲ್ಲಾ । ರಕ್ಷ್ಕಾ ಮಾಡುಬಹು ದೇನೆ ಹೀಗೆ ॥ ೩ ॥ ತಂಗಿ ಕೇಳಿದ್ಯಾ ನಿನ್ನಂತೆಲ್ಲರಿಗೆ ವಿಶ್ವಾಸವಿತ್ತೂ । ಮಂಗಳೇ ಶಾನಲ್ಲಿ ಪ್ರತಿದಿನಾ ॥ ಲಿಂಗವಿಲ್ಲದಾಗುಡಿ ಎಂತಿಲ್ಲೀಹ್ಯದೇನೂ ಹೋಗೂವಾಕು । ರಂಗಾ ನೇತ್ರಿಯರ್ಯಾ ಹುಡುಕುತಾ ॥ ೪ ॥ ಅಮ್ಮಾ ನಾವು ಮೊದಲೀಗೆ । ಅಬಲೀಯರು ಒಮ್ಮಿಂದಾ । ವಮ್ಮೆ ಅಲ್ಲಿಗೆಂತೂ ಪೋದೆವೇ ॥ ಸುಮ್ಮನೆ ಸಹವಾಸಕೊಬ್ಬಾಪುರುಷಾರಿಲ್ಲಾದೆ ಇದು । ಸಮ್ಮತಾವೆ ನಮ್ಮ ಸ್ತ್ರೋಮುಕ್ಕೇ ॥ ೫ ॥ ಘಟ್ಟಯುದೀ ಸಿನ್ನದವ್ವಾ । ಪ್ರಾಣದಾಸೀ ಮಾಡುವದೂ । ಕೃಷ್ಣ ಹೋದವ್ಯಾಲೆ ಬಾಳೀವೆ ॥ ಮುಟ್ಟಲರೀಯುವು ಹುಲಿ ಸಿಂಹಾಗಳರಣ್ಯದಿ ಪಾ । ಪಿಷ್ಟನಾರೆರಂದೂ ನಮ್ಮನೂ ॥ ೬ ॥ ಪುತ್ರ್ರಶೋಕತಾಳದೆ ವಶಿಷ್ಟಪಾವಕ ಜಲವೊಕ್ಕೊ । ಗೋತ್ರದಿಂದ ಪತನವಾಗ್ಯುಳಿದಾ ॥ ಮಿತ್ರಿ ಆವಾವಕಾಲಕ್ಕೆ ಬಂದದ್ದನೂ ಭೋಗೀಸದೆ । ಗಾತ್ರ ನಾಶವಾಗುವದುಂಟೇ ॥ ೭ ॥ ಹೆಣ್ಣು ಸ್ತ್ರೋಮುಗಳಿರ್ಯಾ ಕೇಳಿ ಸಿಮ್ಮಸಿಮ್ಮಾ ಗಂಡರೇನು । ಅನ್ನದೀರೆ ಮನಿಯಾ ಹೊಂದೀರಿ ॥ ಪನ್ನಗಶಯನನ ಪಾದಕಾಣದೀರೆ ನಮ್ಮ ಪ್ರಾಣವನ್ನು ತ್ಯಾಗಮಾಡೊದೆ ಸತ್ಯಾ ॥ ೮ ॥ ಎಂಥ ಮಾತಿದೂ ಪ್ರಾಣೇಶವಿಠಲನ ಕಾಣದಾಲೆ । ನಿಂತೆವೆಂಬೋರಾರೀ ಊರೊಳು ॥ ಕಂತುಪಿತ ಹೋದ ದಾರಿ ಯಾವದೊ ಹುಡುಕೂತಾಹೋಗು । ವಂತೆ ಮಾಡಿರೆಮ್ಮ ಈ ಕ್ಷಣ ॥ ೯ ॥

ಶ್ರೀ ಮಧ್ವೇಶಾರ್ಪಣಮಸ್ತು ॥

೧೫೭. ಪದ, ರಾಗ–ಪೂರ್ವಿ (ಆದಿತಾಳ).

ಹ್ಯಾಂಗೆ ಮಾಡಲೆಮ್ಮ ರಂಗಾ ಹೋಗಿ ಬರಲಿಲ್ಲಾ ॥ ಈಗ ಬರುಧೀನೆಂದು ಹೇಳಿ । ಬ್ಯಾಗ ಹೋದಾ ಹೇಳೆ ಬುದ್ಧೀ ॥ ಪಲ್ಲ ॥ ಮಂದಿರವೆಂಬೊದುಬ್ಯಾನರಿಟ್ಟ ತನ್ನುದಕಾ । ವೆಂದರೊಲ್ಲಾದಮ್ಮ ಜೀವಾ ನಿನ್ನೆ ಬೆಳತನಕಾ ॥ ಇಂದಿರೇಶನ ಪಾದ ಧ್ಯಾನಾ । ದಿಂದ ಮೊಗ್ಗಾಲೋಳು ಮೊಲಿಯಾ । ಕಂದಸ್ಥಂಬಲ ಜರಿದೇ ಆರೆನಂದರೂ ಆನವಲ್ಲರ್‍ಯಾಕೇ ॥ ೧ ॥ ಇದ್ದ ಕಾಲಕೆ ಅತ್ತಿಅತ್ತಿಗಿ ಗಂಡಮೈದುನರಾ । ಸದ್ದು ತಪ್ಪಿಸೋದರೊಳಗೆ ಬಟ್ಟವೇ ಘೋರಾ ॥ ಮುದ್ಧ್ಯದಲ್ಲೊ ಪ್ಪಿಂದಲೊಮ್ಮೆ ಯುದ್ಧ ಮಧುರಾಪುರದಸ್ತ್ರೀಯರು । ಬುದ್ಧಿವಂತಾರಾದರು ನಾವೆ । ಕದ್ದಕಳ್ಳೇರಾದಿವೆಲ್ಲೆ ॥ ೨ ॥ ಮಾರ ಬ್ರಹ್ಮಾ ರಾಣಿಯಿಟ್ಟದು ಜ್ಞಾಪಕಿರದೇನೇ । ಧೀರ ಶ್ರೀ ಪ್ರಾಣೇಶವಿಠಲಗೆ ದಾರಿಕೊಡ ರೇನೇ ॥ ನಾರಿಯರ ವಶವಾದನೇನೊ । ತೋರದು ಮತಿ ಜಾಣೆ ಯಮುನಾ । ತೀರಕನ್ನಾ ಹೋಗುವನಲ್ಲಿಂ । ದಾರಿಯಲಿ ಬಾಹೋರ ಕೇಳುವ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೫೮. ಪದ, ರಾಗ–ಪೂರ್ವಿ (ಅಟತಾಳ).

ಕೃಷ್ಣ ಹೋಗಿಹ ದಾರೀದಾಧೀತೇ । ಹ್ಯಾಂಗೆ ಸಿಕ್ಕಿತೇ । ಮಧುರಿ ಎಷ್ಟು ಯಿದ್ಧೀತೇ ॥ ಪಲ್ಲ ॥ ಶ್ಲೋಕ ॥ ದುಗ್ಧ ತರುವ ಗೋಪಾಲಕನೆ ಆವಲ್ಲಿ ಪೋಪ । ಕೃದ್ಧ ಖಳಹ ಶ್ರೀಪಾ । ಕೇಳು ಎಮ್ಮಯ ಪ್ರಳಾಪಾ ॥ ಸದ್ಯಮದನ ಬನ್ನಾಬಡಿಸುವಾ ಶಳದು ಚಾಪಾ । ಮಧ್ವಪತಿಯು ಹೋದಾಕಾರಣಾ ವಿರಹ ತಾಪಾ ॥ ೧ ॥ ಪದ ॥ ತಂಗಿ ನೋಡಿರೆ ಮುಂದೆ ವಾಯಸಾ । ಎರಳಿಯು ಯೇಸಾ । ಮಿಕ್ಕ ಶಕುನದಲೇಸಾ । ಹಂಗಗಳೆಡಬಲ ಪೋಪದೂ । ಜನ ಬಾಹದು । ಕರದಲಿ ಪಿಡಿದಿಹದೂ ॥ ರಂಗ ಹೋದನೆ ಎಂದು ಕೇಳೀರೆ ನಾಚಬ್ಯಾಡೀರೆ, । ನಗವೇರಿ ನೋಡಿರೆ । ಭಂಗವಾಯಿತು ನಮ್ಮ ಸುಖವೆಲ್ಲಾ । ಇಂದಿರಾನಲ್ಲಾ । ಘಾತಮಾಡೀದಕುಲ್ಲಾ ॥ ೨ ॥ ಶ್ಲೋಕ ॥ ಅಕ್ಕ ಹರಿಯ ಪಾದಾ । ಅಹುದೆ ನೋಡಿವನು ಆದಾ । ರಕ್ಕರವೆಮಗೀಗಾ । ನಿಲ್ಲಧೋಗುವದು ಮೋದಾ ॥ ಘಕ್ಕನೆ ರಥದಿಂದಾ ಇಳದು ಇದ್ಧಾನೆ ಮಾಧವ ಕ್ರೂರ

ಸತಿಸೂದಾ ನನ್ನ ಪುಟ್ಟಿಸಿದವೇಧಾ ॥ ೩ ॥ ಪದ ॥ ಅವನ ಹೆಸರು ಮತ್ತೆ ಕೊಳಬೇಕೆ । ಪಾಪಿಯನಬೇಕೆ । ಹೆಣ್ಣುಜನ್ಮವು ಸಾಕೇ । ತವಕದಿ ಅನಿ ರುದ್ಧನೊಳು ನಾವು । ಸ್ನೇಹ ಬೆರದೆವೂ । ಈಗ ಬಯಲ ಬಿದ್ದೇವೂ ॥ ಭುವ ನೇಶನಂಘ್ರಿ ಪ್ರಮಾಣವಾ । ಬಲ್ಲಿರೇನವ್ವಾ । ಈ ಮಾರ್ಗದೊಳಗೆ ಆವಾ । ಕವಿಮೂಢಜನ ಪೋಗಿ ಬರುನದೋ । ಹೆಜ್ಜೆ ಆರದೋ । ದುರ್ಲಭವು ದೊರಕುವದೂ ॥ ೪ ॥ ಶ್ಲೋಕ ॥ ಮುಂದೆ ಕಾಣಿಸೊ ಬಿಳುಪು ಏನಾಧಿ ತವ್ವಾ । ಇಂದಿರೇಶಾ ಪಾಮನಸೆ ಆಧಾನೆಯವ್ವಾ ॥ ಚಂದ್ರಾನದನೆ ಒಬ್ಬ ವಳು ಪೋಗುವದು ಧಾವಾ । ತೆಂದು ಜರಿಯದೇ ಹಿಂದೆ ನಾವೆಲ್ಲ ಬರುವಾ ॥ ೫ ॥ ಪದ ॥ ಸ್ವಾಮಿಾಯು ತೇರಿನ ಕಲಸೀದೆ ನಿಜವಾಗಿದೇ । ನಮ್ಮ ಸುದ ತಿಯು ಹೋದೆ । ನೇ ಮುಂದಕ್ಕೆಂದರೆ ಬಿಡಳಲ್ಲಾ । ನಿಂತಿದ್ಧಾನಲ್ಲಾ । ಈ ಕ್ಷಣಕೆ ಕಂಡೆವಲ್ಲಾ ॥ ಭಾಮಿನಿಯರೆ ನಾವು ವಂದಾಗೀ । ಆ ಪಾಪಿಯ ನೀಗಿ । ನಾವು ಅಚ್ಯುತ ಸಾಗೀ । ಶ್ರೀಮದಗೋಕುಲಕಿಂದು ಹೋಗೋಣಾ । ಕ್ರೀಡಿ ಮಾಡೋಣಾ । ಆನಂದಾಬ್ಧಿ ಈಸೋಣಾ ॥ ೬ ॥ ಶ್ಲೋಕ ॥ ಧರಿಯಾಕೆ ಕ್ಷೀಣಿಸಿಹದು ವೆಗ್ಗಳವಾಗೀ ಸ್ಥಳದಲೀ । ಸುರಪತಿ ಕುಳತಿದ್ದಾ ಶಂದನಾ ಹೋದ ಗಾಲೀ ॥ ಭರವಿದು ನಿಜವವ್ಮಾ ಈಗ ರವಿಜಾತಟಯಲೀ । ಯರ ಕೊಳು ತಿಹ ಬ್ಯಾಗಾ ಕಾಲುಮಾಡೊನೆ ಕೇಳೀ ॥ ೭ ॥ ಪದ ॥ ಚೂತವೃಕ್ಷವೆ ಸಂಕ ರಷಣನ್ನಾ ಕಂಡ್ಯಾ ಪೋಪನ್ನಾ । ಹೇಳಿಕೊಟ್ಟಾರೆ ನಿನ್ನಾ । ಖ್ಯಾತಿಯಾಗು ವದೆಮಗನುಗಾಲಾ । ಅಶ್ವತ್ಥತಾಳಾ । ವಟುರಂಭಗೋಪಾಲಾ ॥ ನಾಥನ ಪಥದೊಳು ಕಂಡೀರ್ಯಾ । ಆಗ ಯಿದ್ಧಿರ್ಯಾ । ನಮ್ಮ ಕುರುಹು ಬಲ್ಲೀರ್ಯಾ । ವಾತೇಶನಂಗಾಸಂಗದವರೂ । ನಾವು ಹದಿನಾರು ಹತ್ತುನೂರು ನಾರಿ ಯರೂ ॥ ೮ ॥ ಶ್ಲೋಕ ॥ ಎಲ ಮರುಳೆ ಅಬಲಿಗಳಿರ್ಯಾ । ಮರಗಳಾಡುವವೆ ಮಾತಾ । ನಳಿನನಯನ ಯಿಂಥಾ ಹುಚ್ಚು ಹಿಡಿಸಿದನೆ ಧಾತಾ ॥ ತಿಳಿದು ಬರಿಯಲಿಲ್ಲಾವೇನು ಫಣಿಯಲ್ಲಿ ಲಿಖಿತಾ । ಘಳಿಗಿ ಅಗಲದಂಥಾ । ರಮಣ ಆರಲ್ಲಿ ಬೆರತಾ ॥ ೯ ॥ ಪದ ॥ ಲೋಕದೊಳಗೆ ಜಾರತನವನ್ನೂ ಮಾಡಧಾ ರೇನೂ । ಬಿಡುವರೆ ವಲ್ಲಭರನೂ । ಕೂಕ ಬುದ್ಧಿಯುವರು ನಾವೆಲ್ಲಾ । ಇದು ಥರವಲ್ಲಾ । ವಗತನ ಬಿಟ್ಟುನಲ್ಲಾ ॥ ರ್‍ಯಾಕೆ ಕೋಪಿಸುವಂತೆ ಈ ಪರೀ ।

ಮಾಡಿದಿವೆನಾರೀ । ಈಗ ಬಂತಲ್ಲೆ ಸೂರೀ । ಮಾಕಾಂತ ಹೋದಲ್ಲಿ ಜಲ ಹುಟ್ಟಾ । ಬ್ಯಾಡವಕ್ಕಾಟಾ । ಮಾಡಿದನು ನಮ್ಮ ಭ್ರಷ್ಟಾ ॥ ೧೦ ॥ ಶ್ಲೋಕ ॥ ಈಗಿನ ಬುದ್ಧಿ ಮುಂಚೆ ವಬ್ಬಳೀಘುಟ್ಟಲಿಲ್ಲಾ । ಆಗ ಪಾಲಾಜ್ಯದಧಿಯೂ । ಕದ್ದರೂ ಕದಿಯಲಿಲ್ಲಾ ॥ ನಾಗವರದನೆಂದೂ । ಮುಚ್ಚಿಕೊಂಬುವಿರಿ ಎಲ್ಲಾ । ಭಾಗೀರಥಿಪಿತಾ ಎಲ್ಲಿಹಾನೀಗ ಕಳ್ಳಾ ॥ ೧೧ ॥ ಪದ ॥ ತಿಳಿದು ತಿಳಿದಾ ರಣ್ಯ ಬಿದ್ದೀವೆ । ಹ್ಯಾಗೆ ಹೋದೆವೆ । ಮೊಗವೆಂತು ತೋರೆವೇ । ಬಲು ಮಂದಿ ಮುಂದೆ ಬಾಳಿವಿಗೇಡೂ । ನಮ್ಮನು ಕಾಡೂ । ತಿಹರವಿಜಾನು ನೋಡೂ ॥ ಬಲಿಧ್ವಂಸಿ ಹೋದರೆ ತುಚ್ಛವಾ । ಮಾಡಿ ಸ್ನೇಹವಾ । ಸಂಪಾ ದಿಸಲಿಲ್ಲೆ ಧಾವಾ । ರೊಳಗೆ ಇಲ್ಲೀಗ ಬರಬಹುದೇ । ಕೇಡು ವಂದೊಂದೆ । ಪರಿಪರಿ ಉಂಟು ಬಾಧೇ ॥ ೧೨ ॥ ಶ್ಲೋಕ ॥ ಬೊಮ್ಮಾಕಾಮುನ ಆಣೆಕೊ ಟ್ಟದ್ದ ಮಾತ್ರಾ । ಅವ್ಮಾ ಬಾರದೆ । ನಿಲ್ಲನೆ ಪಾರ್ಥಮಿತ್ರಾ ॥ ಕರ್ನಾವೀ ಗಲೆ ಪೋಪವಲ್ಲಾ ಪತತ್ರಾ । ಜನ್ಮಾವಾದರೆ ಅಯ್ಯೋ ಕಮಲಾಕಳತ್ರಾ ॥ ೧೩ ॥ ಪದ ॥ ಆಣೆಲ್ಲೆದವ್ಮ ಗೋವಿಂದಗೆ । ಕೇಶವನ ಬಗೆ । ಬಲ್ಲೆವೆ ಲ್ಲಾರು ಈಗೆ । ನಾನಿರ್ವಣೇಶಗೆ ಹೊಸ ಗುಣಾ । ಬಂತೆಗೀರ್ವಾಣಾ । ವಂದ್ಯ ಎಂದಿಗೂ ಹೀನಾ ॥ ಆ ನಗರವಿಲ್ಲಿಗೆ ದೂರವೋ । ಸಮೀಪವೊ । ನದಿಯೊಳಗೆ ದಾಟವ್ಯೋ । ಭಾನುಸಖಾನನೆ ಕೂಗಿದಾ । ರಾರು ಕೇಳಿದ್ಯಾ । ಪ್ರಾಯ ಆದಾನು ಶ್ರೀದಾ ॥ ೧೪ ॥ ಶ್ಲೋಕ ॥ ಸಖೀ ವೋಡಿಹೋಗಲ್ಕೆಕೂಗಳತಿ ಮಾತ್ರಾ । ಶಕಟಾಂತಕಾನಂದ ಗೋಪನ್ನಪುತ್ರಾ ॥ ಮುಖಾ ಕಾಣಿಸಿ ಕೊಂಬುವಾ । ಈ ಚರಿತ್ರಾ । ಸುಖದಿಂದಲಿ ಕೇಳುವಾನೀಲಗಾತ್ರಾ ॥ ೧೫ ॥ ॥ ಪದ ॥ ನಿಲ್ಲಾದೆ ಹೋಗಿದ್ದರೆ ಸಿಗುವಾ । ದೇವರದೇವಾ । ಹೊತ್ತು ಹೋಯಿತಲ್ಲವ್ವಾ । ಇಲ್ಲೇ ವ್ಯರ್ಥವಾಗಿ ಬಿಸಲೊಳೂ । ದಣಿದೆವು ಕಾಲು । ನೋವುಗೊಂದಾವು ಬಲೂ ॥ ಮಲ್ಲಾರಿ ಹೆಜ್ಜೆ ಇಲ್ಲಿವೆ ನೋಡಿ । ವಂದನಿಯು ಮಾಡಿ । ಊರು ಸ್ಥಳವನ್ನು ಕೂಡಿ । ಅಲ್ಲಂಗನಿಯ ಕೊಟ್ಟ ಪರಿಯಲ್ಲೀ । ಪಾದರಜದಲ್ಲೀ । ದೇಹ ಹೊರಳಿಸಿರಿಲ್ಲೀ ॥ ೧೬ ॥ ಶ್ಲೋಕ ॥ ಮಾರನಾಕಾಟ ಶಾಂತೀ । ಆಗುವಾದಾರಿ ಕಾಣಾ । ಬಾರದೆಮಗೆ ಇನ್ನೆಂತು ಉಳಧೀತು ಪ್ರಾಣಾ ॥ ಭಾರೀಭಾರಿಗೆ ಮರಿಯದೂ ಹರಿಯ ಧ್ಯಾನಾ । ನಾರಾಯಣನು

ಮುರಿದನು ನಮ್ಮ ಗೋಣಾ ॥ ೧೭ ॥ ಮುಟ್ಟಮಧ್ಯಾಹ್ನವು ಆಯಿತು ದೇಹ ಬಳಲೀತೂ । ಕತ್ತಲಿಲ್ಲೀ ಆಧೀತೂ । ಮುಟ್ಟುವನಡಿರೆ ಗೋಕುಲಕನ್ನಾ । ನಮ್ಮವರನ್ನಾ । ಸಂವದಿಸುವನೆ ಅನ್ನ್ಯಾ॥ ದುಷ್ಟ ಬುದ್ಧಿಯು ವಂದುತಿಲಾಂಶಾ। ನೆನಿಸದೆ ಕ್ಲೇಶಾ । ವನ್ನು ಕಳೆವ ಪ್ರಾಣೇಶಾ । ವಿಠ್ಠಲ ತಾನೇವೆ ಬಂಧಾನು । ನಮ್ಮ ಕೂಡ್ಯಾನು । ಅಲ್ಲಿ ತಡದು ನಿಲ್ಲಾನೂ ॥ ೧೮ ॥ ಶ್ರೀ ಮಧ್ವೇಶಾರ್ಪಣ ಮಸ್ತು ॥

೧೫೯. ರಾಗ–ಸಾವೇರಿ (ಏಕತಾಳ).

ರಂಗ ಬಂದನಂತಲ್ಲೇ । ಸಖಿ–ರಂಗ ಬಂದನಂತಲ್ಲೆ ॥ ಖಳನಿಂಗಿತ ತಿಳಿದಿಲ್ಲಲ್ಲೆ ॥ ಪಲ್ಲ ॥ ಶ್ರೀರಮಣನ ಪಾದಾಬ್ಜದಲಿ । ಅ । ಕ್ರೂರಗೆ ಅತಿಭಕು ತೆಲ್ಲೆ ॥ ಕ್ರೂರನ ಮತಿ ಹೀಗೆಂದನಿರುದ್ಧಗೆ। ಪೂರುತಿ ತಿಳಸಿಲ್ಲಲ್ಲೇ॥ ಸಖಿ ॥ ೧ ॥ ಅತಿಹಿತರು ಬೇಡೆನದಲೆ । ಗೋಪಿಕ । ಸತಿಯರು ಕಳಸಿಹರಲ್ಲೇ ॥ ಪತಿ ತೋದ್ಧಾರನ ಬಿಟ್ಟು ಬದುಕುವರು । ಕ್ಷಿತಿಯೊಳು ಬಹುಧಿಟ್ಟರಲ್ಲೆ ॥ ಸಖಿ ॥ ೨ ॥ ವಾರಿಜ ಬೈಲಿಗೆ ಬಿದ್ದಂತಿಂದಾ। ನಾರಿಯರಿಗಾಗಿಹದಲ್ಲೆ ॥ ಜಾರತನವ ಮಾಡಿದರೆಂದಾಡುವ । ಧೀರರು ಕೊಲ್ಲುತಿಹರಲ್ಲೇ ॥ ೩ ॥ ಇಂದಿರೆ ಅರಸನ ಎಂದಿಗೆ ಕಂಡೆವೋ । ಎಂದು ದೇವೆ ಆಯಿತಲ್ಲೇ ॥ ಇಂದುವದನ ಇಂದೀ ಊರಿಗೆ ಹರಿ । ಬಂದರು ಬರದಂತಲ್ಲೇ ॥ ೪ ॥ ಅನುದಿನ ಶ್ರೀಹರಿ ಸಂಗವು ಬೇಕೆಂದು । ನೆನೆನೆನಸುತಿದ್ದೇವಲ್ಲೆ ॥ ಮನಸಿಜ ಜನಕಾಲಿಂಗಿಸಿದಂದದಿ । ಕನ ಸಿಂದು ಕಂಡೆನಲ್ಲೇ ॥ ೫ ॥ ಆ ಗರತಿ ಯಶೋದೆಗೆ ಎರಗಲು ಜಯ । ವಾಗೆಂಧ ರಸಿಹಳಲ್ಲೇ ॥ ನಾಗಗಮನೆ ಹೆತ್ತವರ ಹರಕೆಸುತ । ಗಾಗುವದು ನಿಜವಲ್ಲೇ ॥ ೬ ॥ ಸೃಷ್ಟ್ಯಾದಿಗಳಿಗೆ ಕರ್ತೃನೆಂದು ಶೃತಿ । ಕೃಷ್ಣನ ಪೊಗಳುವದಿಲ್ಲೇ ॥ ದೃಷ್ಟಿಸೆ ಕಂಸನತರಿವುದು ಪ್ರಾಣೇಶವಿಠ್ಠಲನೇ ಗರಿದಲ್ಲೆ ॥ ಸಖಿ ॥ ೭ ॥

೧೬೦. ಪದ, ರಾಗ–ಲಾವಣಿಧಾಟಿ (ಏಕತಾಳ).

ಇಕ್ಕೊಳ್ಳಿ ಬೀಳ್ಳೂ । ತಕ್ಕೊಳ್ಳಿ ಕಲ್ಲೂ । ಹಾಕೆಲ್ಲಿಗ್ಯೋಡಧಿರೆಲಾ ॥ ಲೋಕೆಲ್ಲ ನಡುಗೋದು । ಈ ಕೆಲಸೆಲ್ಲಿದು । ಯಾಕೆಮ್ಮ ಕೊಲ್ಲಧಿಯಲಾ ॥ ೧ ॥ ನಾರದಮುನಿ ವಿಸ್ತಾರಿಸಿದಂದದಿ । ಪೋರನ ಕೊಲ್ಲಬೇಕ್ರೆಲಾ ॥

ನಾರದಮುನಿ ಬಲು ಶೂರನೇ, ತಿಳಿಯದೆ । ಈ ರೀತಿ ಮಾಡಿಕೊಂಡೆಲಾ ॥ ೨ ॥ ಶಿವನಾರಾಧನಿ । ಜವದಿಂದ ಮಾಡಿಹೆ । ಭುವನದಿ ಸೋಲಿಲ್ಲ್ರೆಲಾ ॥ ಭವ ನೊರವೆಲ್ಲಾ । ಸವಿಗೆಡಿಸಿದನೂ । ಇವಗ್ಯಾರೆದಿರಿಲ್ಲೆಲಾ ॥ ೩ ॥ ಮಿಂಚುವ ಮುತ್ತಿನ । ಗೊಂಚಲ ಕೊಡುವೆನು । ವಂಚನೆ ಮಾಡಬೆಡ್ರೆಲಾ ॥ ಚಂಚಲ ರಾದೆವು । ಮಿಂಚುವ ಮುತ್ತಿನ । ಗೊಂಚಲ ಸುಡಬೇಕೆಲಾ ॥ ೪ ॥ ಸೃಷ್ಟಿ ಯೊಳಗೆ ಬಹು । ದಿಟ್ಟಬಂಟರೆಂ । ದಿಟ್ಟಹೆ ನಿಮ್ಮನೆಲಾ ॥ ಬೆಟ್ಟದಂಥ ಗಜ । ಕುಟ್ಟೀದ ಮಲ್ಲರ । ದೃಷ್ಟಿಸಲಿಲ್ಲೆನೆಲಾ ॥ ೫ ॥ ಉಮ್ಮಳೀಗ್ರಾಮವ । ಸವಿಮ್ಮಾಸಿ ಕೊಡುವೆನು । ಹವಿಮ್ಮಾಲಿ ಕೊಲ್ಲಬೇಕ್ರೆಲಾ ॥ ಉಮ್ಮಳಿಯಲ್ಲದು । ಮುಮ್ಮಳಿ ಜೀವಕೆ । ನಮ್ನೇನ್ನೀಡಗಾಣೆಲಾ ॥ ೬ ॥ ಮಾತು ಬಿಟ್ಟು ಬ । ಲ್ ಭೀತಿ ಗೊಂಡು ಹೀಗ್ಯಾತಕೆ ನಿಂತೀರೆಲಾ ॥ ಜೋತಿರೂಪನಾ । ಯೀತೆಜಾಕ್ಷಿಯ । ನೀತೆರದು ನೋಡೆಲಾ ॥ ೭ ॥ ಕಟ್ಟ ರೂಪದಿಂ ದೃಷ್ಟಿಗೆ ತೋರುವ । ಕೃಷ್ಣನು ಇವನ್ಯಾರೆಲಾ ॥ ತ್ರಿಷ್ಟಿಪ ಪ್ರಾಣೇಶವಿಠ್ಠಲನಿವನೂ । ಕುಟ್ಟೂವ ನಿನ್ನೀಗೆಲಾ ॥ ೮ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೬೧. ರಾಗ–ಕಾಂಬೋಧಿ (ಅಟತಾಳ).

ಮಾರಿ ಬಂದ ಕೃಷ್ಣ ಎಲ್ಲನೇ । ಕೂಗಿ । ಮಾರಿಕರಕೊಂಡ ಕಂಸನು ತಾನೇ ॥ ಪಲ್ಲ ॥ ನಾಗಸಿಂದಾನೆಯ ಮೇಲೆ ಇರಿಸಿ ವೈತಿರಲುವ । ಸ್ತ್ರಗಳ ಕಂಡೆ ಮಗವು ಕೂಡು ಎನಲೂ ॥ ಜಗದೇಶನೆಂದು ತಿಳಿಯದೆ ಮನ್ನಿಸ ದಿರೆ । ಅಗಸಾನಿಭವ ಕೊಂದರಿವೆ ಸೂರಿ ಮಾಡುತ ॥ ೧ ॥ ಗೋಪಾಲ ರಾಮರ ಸಹಿತ ಮುದದಿ ಮಧು । ರಾಪುರ ಪೊಗಲು ಅಲ್ಲಿಹ ಜನರೂ ॥ ಶ್ರೀ ಪತಿಯನು ನೋಡಲ್ಕಾರಾರ ಮನಸೆಂತೊ । ಆ ಪರಿ ತೋರುತ ರಾಜಪಂಥಾ ನಾದಿ ॥ ೨ ॥ ಉಬ್ಬುಬ್ಬಿಲಿಂದ ಕೃಷ್ಣನ ಕೊಲ್ಲಬೇಕೆಂದು । ಕೊಬ್ಬಿದ ಗಜ ವನ್ನು ಮೇಲ್ಬಿಡಲೂ ॥ ಅಬ್ಬರಿಸುತ ಸೀಳಿ, ದಂತ, ರಾಮನು ತಾನು । ಇಬ್ಬರು ಹೊತ್ತು ರಕ್ತಾಂಕಿತರಾಗುತ ॥ ೩ ॥ ಕಂಡರು ಚಾಣೂರ ಮುಷ್ಟಿಕಮಲ್ಲಿದು । ಭಂಡೆಲೆ ನಮಗೇನು ಗತಿ ಎನ್ನುತಾ ॥ ಮಂಡಲದೊಳು ಮಾರಿದವರೆಂಬ ಹವಿಮ್ಮಾಗೆ । ಪುಂಡರಿಕಾಕ್ಷನ ಎದುರಿಗೆ ನಿಂತರೂ ॥ ೪ ॥ ಬಲ್ಲಷ್ಟು ಯುದ್ಧವ

ಬಡದಾಡಕೊಳಲೆಂದು । ಕಲ್ಲಂತೆ ನಿಂತನು ನೋಯದಲೆ ॥ ಬಲ್ಲಿದಕ್ಷಣ ಮಾತ್ರಕಿಬ್ಬರ ಕೊಂದ್ಯಮ । ನಲ್ಲಿಗೆ ಕಳುಹಿದ ದುರ್ಜೀವಿಗಳನು ॥ ೫ ॥ ಆರಾರಿಗೆಂದಿಗೊಳಗಾಗ ಬೇಡೆಂದು ದ್ವಾರದೊಳಿಟ್ಟದ್ದ ಶಿವನ ಬಿಲ್ಲೂ ॥ ಆರಾಧಿಸುತಲಿರೆ ಕಂಡು ಲೀಲೆಯಲಿಂದ । ಚೂರು ಚೂರು ಮಾಡಿ ನಡೆತರುತಿದ್ದನು ॥ ೬ ॥ ಗಂಧವ ಹಚ್ಚಿ ಕುಬುಜೆ ತಿದ್ದಲಾಕ್ಷಣ । ತಂದುಕೊಟ್ಟರು ಮಾಲೆ ಕನ್ನಡಿಯಾ ॥ ಛಂದಾದಿ ವಸ್ತ್ರಗಳನ್ನು ಹೊದ್ದಿಸುವರು । ಮುಂದೆಲ್ಲ ನಮೊನಮೊ ಸ್ವಾಮಿ ಎಂಬುವರೂ ॥ ೭ ॥ ಚಂಡಂತೆ ಕುಣಿಕುಣಿದಾಡುತ ಊರೊಳು । ದಿಂಡಿಕ್ಕಿ ಹುಡುಕುತ ಬಹು ಖಳರಾ ॥ ಚಂಡಿಕಿಗಳ ಹಿಡಿಧಿಡಿದು ಸರ್ವರ ಪ್ರಾಣ । ಕೊಂಡು ಹಾರುತ ಪೋಗಿ ಮಾವನ ಮನಿ ಪೊಕ್ಕ ॥ ೮ ॥ ಕೆಟ್ಟೆ ಕೆಟ್ಟೆ ಎಂದು ಮಂಚಿಕಿ ಏರಾಲು । ಬಿಟ್ಟೆನೇ ನಿನ್ನಾಡಗಿದರೆನುತಾ ॥ ಮುಷ್ಟಿಲಿ ಗುದ್ದಿ ಕಂಸನ ಕೊಂದು ಪ್ರಾಣೇಶಾ । ವಿಠ್ಠಲ ದೇವಕಿಯರ ಬಂದಿ ಬಿಡಿಸೀದ ॥ ೯ ॥

## (೨೩). ಶ್ರೀ ದೇವರ ವಿವಾಹಮಹೋತ್ಸವ ಪದಗಳು.

೧೬೨. ಪದ, ರಾಗ–ಕಾಂಬೋಧಿ (ಝಂಪೆತಾಳ).

ಏನು ನೋಡಿತ್ತ ನೀ ವರಕೆ ಮಗಳಾ ॥ ಹೀನವಳಿತೆನ್ನದಲೆ ತ್ವರದಿ ಜಲನಿಧಿಯೂ ॥ ಪಲ್ಲ ॥ ಕಪ್ಪು ರೂಪವು ಇವನ ನೆಲಿ ಒಬ್ಬರರಿಯರೂ । ಸರ್ಪಶಯನನು ತಿರಿದುಕೊಂಡು ತಿಂಬಾ ॥ ಮುಪ್ಪಿನವ ಇವ ಹುಟ್ಟದದುನಾರು ಬಲ್ಲವರು । ತಪ್ಪಿಕೊಟ್ಟನೆ ಎಲ್ಲರನು ಜರಿದು ಹೀಂಗೇ ॥ ೧ ॥ ಕದ್ದು ಪೊಟ್ಟೆಯ ಪೊರವ । ಯಂಜಲೆನ್ನದೆ ತಿಂಬ । ಹದ್ದನೇರುವ ಅಡವಿಯೊಳು ಚರಿಸುವಾ ॥ ಬುದ್ಧಿಹೀನರ ತೆರದಿ ಹಡದವಳ ಶಿರ ಕಡಿದ । ಸಧ್ಯ ವಸನವ ಕಳದು ಬತ್ತಲಿರುವವನಗೇ ॥ ೨ ॥ ಹೇಸಿಕಿಲ್ಲದೆ ಕರಳ ಮಾಲಿಕಿಯ ಹಾಕಿಹನು । ದೋಷ ಕಂಜನು ಜಾರತನವ ಮಾಳ್ಪಾ ॥ ದಾಸನಂದದಿ ಬಲಿಯ ಮನಿಯ ಬಾಗಿಲ ಕಾಯ್ದು । ಆ ಸವ್ಯಸಾಚಿ ತೇರಿಗೆ ಸೂತನಾದವಗೆ ॥ ೩ ॥ ಹೆಣ್ಣುಗಳ ಅಂಬರವ ಕೊಂಡು ಮರನೇರುವನು । ತನ್ನ ಮಕ್ಕಳ ತಾನೆ ಹತಗೈಸುವಾ ॥ ಮಂಣನೂ

ಬೆಂಕಿಯನು ತಿಂಬ ಪಾವಿಯನರಿಯ, । ತನ್ನ ಪುತ್ರರಿಗೆ, ತನ್ನಯ ಮಕ್ಕಳಿತ್ತ ವಗೆ ॥ ೪ ॥ ಪ್ರಾಣೇಶವಿಠಲನಲ್ಲಿಹವಿಂಥ ಸುಗುಣಗಳು । ತಾನೊಂದು ಪೂರ್ತಿ ತಿಳಿಯನು ಸಮುದ್ರಾ ॥ ಶ್ರೀ ನಾರಿಯನು ಕೊಟ್ಟ ಅವನ ಬುದ್ಧಿಯೊ ಅಥವ । ಏನು ವೃತ ಸೇವಿಸಿದ್ದಳೊ ಕಮಲಮಂದಿರಿಯು ॥ ೫ ॥ ಶ್ರೀ ಮಧ್ವೇಶಾರ್ಪಣ ಮಸ್ತು ॥

೧೬೩. ಪದ, ರಾಗ--ಕಾಂಬೋಧಿ (ಏಕತಾಳ).

ವರುಣಗೂ ನಾರಾಯಣಗು ನೆಂಟತನ ಮಾಡುವದಕೆ । ಸರಿಯೆ ಸಂದೇಹವೇನು ಸಮ್ಮಿಸಿ ನೋಡೀ ॥ ಪಲ್ಲ ॥ ಹೆಂಡಾರು ಬಹು ಮಂದಿ ಜಾರಾ ಪುತ್ರನು ಒಬ್ಬ ॥ ಪಂಡೀತ ಮಗನೊಬ್ಬ ಸಮನೆಲ್ಲಿ ನೋಡಿ ॥ ೧ ॥ ವಂಶಾ ವಂದೆ ಇಬ್ಬರದು ಛಲದಿಂದ ಕೊಲ್ಲುವಂಥಾ ॥ ಕೂಸು ಪಾಲಿಸಿದಾರು ಸಮ ನೆಲ್ಲಿ ನೋಡಿ ॥ ೨ ॥ ಸ್ಥೂಲಾವಿಗ್ರಹದವರು ಜಡಚೇತನಗಳಿಗೆ ॥ ಆಲಯ ವಾಗಿಹರು ಸಮನೆಲ್ಲಿ ನೋಡಿ ॥ ೩ ॥ ಕನಕಾಭೂಮಿ ವಜ್ರದಾಹಾರಾ ಒಬ್ಬಾ ಗೊಬ್ಬಾಗೆ ॥ ವನಮಾಲಿ ವೈಜಯಂತಿ ಸಮನಲ್ಲಿ ನೋಡಿ ॥ ೪ ॥ ತುಳಿಸೀ ಕೊಂಡೂ, ಕೋಪಿಸದಲೆವೇ ಹಿಗ್ಗಿದಾರು ॥ ಕಲುಷಾ ವಿದೂರ ರೂಪ ಸಮಂ ॥ ೫ ॥ ದ್ವಾರಕ ಪಟ್ಟಣವ ಪ್ರೀತಿಂದ ಪಾಲೀಸೀ ॥ ಹಾರಾವ ಮಾಡಿದಾ ರು ಸಮಂ ॥ ೬ ॥ ವೃದ್ಧಿಹ್ರಾಸಗಳಿಲ್ಲಾ ಅನ್ಯಾದಾಪೇಕ್ಷವಿಲ್ಲ ॥ ಸಿದ್ರಾಶೂನ್ಯ ರಾಗಿಹರು ಸಮಂ ॥ ೭ ॥ ಸರಸೀಜಾ ರೂಪ ಉಳ್ಳವರು ಪೂರ್ತಿ ಮಾಡಿ ದಾರು ॥ ಸುರರಾ ಮನೊಭಿಷ್ಟಿಯಾ ಸಮನಲ್ಲಿ ನೋಡಿ ॥ ೮ ॥ ವಿಧಿಯಿಂದ ಜನಿಸಿದಾರು ಜನರೀಗಸಂಖ್ಯವಾಗಿ ॥ ವದರುವರು ಇದರಿಂದ ಸಮನಲ್ಲಿ ನೋಡಿ ॥ ೯ ॥ ನೂತನ ಯಜ್ಞೋಪವಿತಾವ ಧರಿಸುವರು ಪ್ರ ॥ ಖ್ಯಾತಿ ವಸ್ತು ಕೊಟ್ಟಾರು ಸಮನೆಲ್ಲಿ ನೋಡಿ ॥ ೧೦ ॥ ದಾರಿ ತೋರಿದಾರು ವಾನರಾಗಳಿಗೆ ಗುಂಜಿ ॥ ಹಾರಾಯೀಸೂವರಿದು ಸಮನೆಲ್ಲಿ ನೋಡಿ ॥ ೧೧ ॥ ವಾಸಾವಿ ವರ್ಜಿತಾರು ದ್ವೇಷಿಗಳ ಶರೀರ ॥ ನಾಶಾಗೈಸಿದರಿದು ಸಮವೆಲ್ಲಿ ನೋಡಿ ॥ ೧೨ ॥ ಶೋಧಿಸೀ ನೋಡಿದಾರೆ ಕರ್ದಾಮ ಜಾಲಯಳ ॥ ಭ್ಯೋದಯಕ್ಕೆ ಕಾರಣರು ಸಮವೆಲ್ಲಿ ನೋಡಿ ॥ ೧೩ ॥ ಧರಿಗಾನಂದಾವಿತ್ತಾರಾಲಂಕಾರವಾಗಿ ಖಳರಾ ॥ ತರಿದು ಭಾರವ ಕಳದು, ಸಮವೆಲ್ಲಿ ನೋಡಿ ॥ ೧೪ ॥ ಶ್ರೀನಿವಾಸಾಗೆ

ಮಾವನೀತಾನೀತಾಗುಹಾಗೆ ॥ ಪ್ರಾಣೇಶವಿಠ್ಠಲನು ಸಮವೆಲ್ಲಿ ನೋಡಿ ॥ ೧೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೬೪. ಪದ, ರಾಗ–ಕಾಂಬೋಧಿ (ಝಂಪೆತಾಳ).

ಜಲಧಿ ತಕ್ಕದೊ ನಿನ್ನಳಿಯಗೂ ನಿನಗೂ । ಹಲವು ಬಗೆಯಿಂದಲಿ ಪರಿಕ್ಷಿಯನು ಮಾಡಿದರೆ ॥ ಜಲಧಿ ತಕ್ಕದೊ ॥ ಪಲ್ಲ ॥ ಮೊದಲೆ ತಿಳದಷ್ಟು ನಿನ್ನ ಮಹತ್ಮಿ ವರ್ಣಿಸುವೆ । ತುದಿಗಂಡು ಬಲ್ಲಿನೇ ಅಧಮ ನಾನೂ ॥ ಎದುರಿ ಗಂಬುವದಾಡಿಕೊಂಡಬಗೆ ಬ್ಯಾರೆಲ್ಲೀ ಮುದದಿಂದ ದಯಮಾಡಿ ಕೇಳೊ ರತ್ನಾಕರನೇ ॥ ೧ ॥ ನಿನ್ನಿಂದ ಹುಟ್ಟಹದು, ವಿಷವು, ಗುರುವಿನ ಪತ್ನಿ । ಯನ್ನು ಸ್ವೀಕರಿಸಿದನು ನಿನ್ನ ಮಗನೂ ॥ ಘನ್ನತರಮಕರಾದಿಗಳು ನಿನ್ನ ಪರಿವಾರ । ಇನ್ನೆಷ್ಟು ಪೇಳಲಿ ಚರಿತ್ರ ಪಾರಾವಾರ ॥ ೨ ॥ ನಿನ ಒಡಲಿಗೆಷ್ಟಾದ ರನ್ನ ಸಾಕನಿನದೂ । ದಣಿದು ಬಂದವರಿಗಾಶ್ರಯವು ಕಾಣೇ ॥ ಉಣಲಿಕ್ಕೆ ಅನ್ನಂಬದೆಂಟನ ರಸದಂತ । ಘನಖ್ಯಾತಿ ದೂರದಲಿ ಬಳಿಗೆ ಬರಲಿಂತಿಹದು ॥ ೩ ॥ ಪ್ರೀತಿಯಿಂ ಬಂದವರು, ಗ್ರಹಣ ವೈಧೃತಿ ವೇತೀ । ಪಾತದಲಿ ನಿನ ದರುಶನಾಗಬೇಕೂ ॥ ಭೂತ ಬಡದವರಂತ ನಿನ್ನ ಕಲ್ಲುಗಳಿಂದ । ಘಾತಿಸಲಿ ಬೇಕು ನೋಡಲ್ಕೆ ಬಹು ಸೋಜಿಗವು ॥ ೪ ॥ ತುಳಿದದಕೆ ಹಿಗ್ಗಿದಿಯೋ ಬಹು ಮಾನಿ ನೀನೆಲವೊ । ಲಲನಿ ಹಡದೇಳು ಶಿಶುಗಳ ಕೊಂದಳೂ ॥ ಬಲುಭಂಟ ಹಿರಿಯ ಮಗಗರಸುತನ ಕೊಡಲಿಲ್ಲ । ಇಳಿಯೊಳಗೆ ನೀ ಮಾಡಿದನ್ಯಾಯ ಕೇಣಿಯುಂಟೆ ॥ ೫ ॥ ಸತಿಸಂಗ ಬಿದಲೊಲ್ಲಿ ಪರ್ವಕಾಲಗಳಲ್ಲಿ । ಸುತಗೆ ಕಡಿಮೆದರಿಂದೆ ಆದಿ ಹ್ಯಾಗೊ ॥ ಪತಿವ್ರತಾಮಗಳಾದಳೊಂದೆ ಸುಗುಣದ ರಿಂದೆ । ಕ್ಷಿತಿಯೊಳನವರತ ಪೂಜಿಸಿಕೊಂಬಿ ಜನರಿಂದ ॥ ೬ ॥ ಜಾಮಾತನಿಗೆ ಇಹವು ಮುಖವು ಹತ್ತೊಂಭತ್ತು । ಆ ಮಧ್ಯ ಗಜಲವನದಂತೆ ವಂದೂ ॥ ಭೂಮಿಯೊಳಗಾಶ್ಚರ್ಯ, ತಾನೆ ಮಕ್ಕಳ ಪಡವ । ಈ ಮಗಳು ಬಹು ಸುಖವ ಬಡುವಳಿವನಿಂದಲ್ಲಿ ॥ ೭ ॥ ಬೆರಳುಚೀಪುವನೋಡು ಸುಳ್ಳಲ್ಲ ದಾನ । ಪುರುಷ ಬದುಕುವ ಚೋರತನದಿ ಜಾರಾ ॥ ತರುಣಿಯಾಗಿದ್ದ ನಿನ ಬಳಿಯಲ್ಲಿ ನೀ ಬಲ್ಲಿ । ತುರುಗಾಟನ ಕೊಡಲಿ ಕೊಂಡಡವಿಯೊಳಗಿರುವ ॥ ೮ ॥ ಗುರುಸ್ವಾಮಿ

ಪಿತಬ್ರಹ್ಮ ವಂಶದ್ರೋಹಿಗಳವನ । ಪರಿವಾರ ಮಕ್ಕಳಿಗೆ ಮಾವನಾದಾ ॥ ಉರುಗಶಯನಂಡಜಾಧಿಪವಹನನೀಲಾಂಗ । ಅರಿತ ನೃಪ ಋಷಿಗಳೊಳ ಗೊಬ್ಬರಿಗ್ಯು ಮಗನಲ್ಲ ॥ ೯ ॥ ಕುಲಸೂತ್ರವಿಲ್ಲ ವಂದೇ ರೂಪನಲ್ಲ ನಿ । ಶ್ಚಲ ನಲ್ಲವತಿ ಕರಿಣ ವಕ್ರವದನಾ ॥ ಬಲುಕೋಪಿ ತಿರದುಂಬ ಸ್ತ್ರೀಯರಿಬ್ಬರ ಕೊಂದ । ಅಲವ ಜಾರನು, ಬತ್ತಲಿರುವ, ಕಲಹಕೆ ಪ್ರೀಯ ॥ ೧೦ ॥ ಕೊಟ್ಟಿಲ್ಲ ಅವನಿಗೀ ಕನ್ನಿಕಿಯು ಸವತಿಯರು । ಎಷ್ಟೋ ಮಲಸುತರಿಹರದಕೆ ದಶ ಮಡೀ ॥ ಸಿಟ್ಟಾಗ ಬ್ಯಾಡವನ ವಾರ್ತಿ ಕೇಳಲು ಜನರು । ಬಿಟ್ಟು ಸಂಸಾರ ವೆಂದಿಂದಗೊಲ್ಲದಿಹರೂ ॥ ೧೧ ॥ ನಿನ್ನ ಮಗಳವಗಿತ್ತವನ ಮಗಳ ಮದಿ ವ್ಯಾದಿ । ಕನ್ಯವಿಕ್ರಯ ಪರಸ್ಪರವೆನಿಸಿತೂ ॥ ಇನ್ನೇಸೊ ನಿಮ್ಮನಿಮ್ಮಲ್ಲಿದ್ದ ನಡತಿಗಳು । ಅನ್ನ್ಯರಿದು ಕೇಳಿ ಭಜಿಸರೂ ಶುದ್ಧ ಭಕುತಿಯಲೀ ॥ ೧೨ ॥ ಏನಾದರೇನು ಶ್ರೀ ಪ್ರಾಣೇಶವಿಠಲನಿಗೆ । ನೀನೆ ಗತಿ ನಿರ್ದೋಷ ವಸ್ತುವೆಂದೂ ॥ ಶ್ರೀನಳಿನ ಭವಮುಖರು ನಿತ್ಯ ವಂದಿಸುತಿಹರೊ । ನೀನವನ ಮಾವನಾದಿನ್ನು ಪೂಜಿತನಲ್ಲೆ ॥ ೧೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೬೫. ಸುಪ್ವಿಪದ. ಪದ, ರಾಗ—ಕಾಂಬೋಧಿ (ಝಂಪೆತಾಳ).

(ಶ್ರೀ ದೇವರ ಮದುವೆಯ ಒರಳು ಕಲ್ಲು ಪೂಜೆಯ ಪದ.)

ಜಯಹನುಮಂತ ಭೀಮ । ಜಯಸರ್ವಜ್ಞಾಚಾರ್ಯ । ಜಯಭಾರ ತೀಶಾನಿರ್ದೋಷಾ ॥ ನಿರ್ದೋಷ ಶ್ರೀವ್ಯಾಸ । ಲಯನೆ ನಿನ್ನಂಘ್ರೀಗೆರ ಗೂವೇ ॥ ಸುವ್ವಿಸುವ್ವೀಸುವ್ವಾಲಾಲೆ ॥ ಪಲ್ಲ ॥ ಮುದದಿಂದಾ ಶ್ರೀಹರಿಯಾ । ಮದಿವಿಹಮ್ಮಾಕೂಂಡು । ಪದುಮಾಕ್ಷಿಯರೆಲ್ಲಾ । ವರಳೀಗೇ ॥ ವರಳಿಗೆಕ್ಕಿ ಹಾಕಿ । ಪದ ಪಾಡಿದದನೂ ಬಣ್ಣೀಪೇ ॥ ೧ ॥ ದೇವಕಿ ಯಶೋದೆ ಶ್ರೀ । ದೇವಭೂತೀ ಕೌಸಲ್ಯ ಸ । ತ್ಯವತಿ ನೀವೆಂಥ ಧನ್ಯರೇ ॥ ಧನ್ಯಾರೆ ಪಡದು ಶ್ರೀ । ದೇವಶಗೆ ಮೊಲಿಯಾ ಕೊಡುವೀರಿ ॥ ೨ ॥ ಅಕ್ಷರಳೆ ಪರಮಾತ್ಮನ । ವಕ್ಷಸ್ಥಳ ಮಂದಿರೆ । ಲಕ್ಷ್ಮಮಿದೇವಿ ಜಯಶೀಲೇ ॥ ಜಯಶೀಲೆ ಎಮ್ಮನೂ ಪೇಕ್ಷಿಸದೆ ಕಾಯೇ ವರವೀಯೇ ॥ ೩ ॥ ಅಚ್ಛಿನ್ನಭಕ್ತರು ನೀವಚ್ಯುತಗೆ

ಮುಕ್ತಿಯಾ । ತುಚ್ಛವೆಂಬುವಿರೆ ಸರಸ್ವತೀ ॥ ಸರಸ್ವತಿ ಭಾರತಿ । ನಿಶ್ಚೈಸಿ ವರಳೀಗೊದಗೀರೆ ॥ ೪ ॥ ಅಕ್ಕಿ ಥಳಿಸಲಿಬಾರೆ । ಅಕ್ಕ ಸೌಪರಣಿ ಶ್ರೀ । ರಕ್ಕಸಾವೈರೀ ಮುದುವೀಗೇ ॥ ಮುದುವೀಗೆ ವಾರುಣಿ । ತಕ್ಕೊಳ್ಳಿ ಕೈಲಿ ಒನಕೀಯಾ ॥ ೫ ॥ ಕೂಸಾಗಿ ಇದ್ದಾಗ ಆ ಶಿವನೆ ಬರಲೆಂದು । ಪೋಷಿಸಿದೆ ದೇಹಾತಪಸೀದೆ ॥ ತಪಸೀದೆ ಪಾರ್ವತಿ । ನೀ ಶೀಘ್ರ ಬಾರೇ ಒರಳೀಗೇ ॥ ೬ ॥ ಇಂದ್ರಕಾಮುನಸತಿಯಾರಿಂದು ಬನ್ನಿರಿ ನಮ್ಮ । ಮುಂದರೋದ್ಧರನಾ ಮದಿವೀಗೇ ॥ ಮುದುವೀಗೆ ವರಳಕ್ಕಿ । ಛಂದದಿಂದಲಿ ಪಾಡಿ ಥಳಿಸೀರೇ ॥ ೭ ॥ ಶತರೂಪಿನೀ ಪ್ರೀಯು ವೃತ ಮೊದಲಾದವರನ್ನ । ಪತಿಯಿಂದ ಪಡದೂ ಅವನೀಯಾ ॥ ಅವನೀಯು ಪಾಲಿಸಿದ । ಪತಿವೃತೀ ಒನಕೀ ಕೈಕೊಳ್ಳೆ ॥ ೮ ॥ ದೇವರಂಗನಿಯರಿಗೆ ಸಾವಧಾನದಿ ಜ್ಞಾನ । ನೀವರದೆ ಎಂಥಾ ಗುಣವಂತೇ ॥ ಗುಣವಂತೆ ಕರುಣಾಳೆ । ಪ್ರಾವಹೀ ಪಿಡಿಯೋ ಒನಕೀಯಾ ॥ ೯ ॥ ಅರುವತ್ತು ಮಕ್ಕಳನಾ ಹರುಷದಿಂದಲಿ ಪಡದು । ವರನೋಡಿ ಕೊಟ್ಟೇ ಪ್ರಸೂತೀ ॥ ಪ್ರಸೂತಿ ನೀನು ಹಂದರದಮುನಿಯೊಳೂ ಇರಬೇಕೂ ॥ ೧೦ ॥ ಗಂಗಾದೇವಿಯಂಥ ಇಂಗಿತಜ್ಞಳೆ ನೀನು । ಹಿಂಗಿಸಿದೆ ವಸುಗಳಪವಾದಾ ॥ ಅಪವಾದ ತ್ರಯು ಜಗ । ನ್ಮಂಗಳೇ ಪಿಡಿಯೇ ಒನಕೀಯಾ ॥ ೧೧ ॥ ಅನಿರುದ್ಧಾಶ್ವಿನಿ ಚಂದ್ರ । ಇನಕಾಲಾಸುರಗುರು । ವನತಿಯರೆ ಉಳಿದಾನವಕೋಟೀ ॥ ನವಕೋಟಿ ಸುರರ ಮಾನಿನಿಯೇರು ಬಂದೂ ಥಳಿಸೀರೇ ॥ ೧೨ ॥ ಅನ್ಯರನ ಪಾಡಿದರೆ ಬನ್ನಬಡಿಸುವ ಯಮುನು । ವನ್ನಜಾಂಬಕನಾಶುಭನಾವೂ ॥ ಶುಭನಾಮು ಪಾಡಿದರೆ । ಧನ್ಯರಿವರೆಂದೂ ಮೊಗಳೂವಾ ॥ ೧೩ ॥ ಈ ವ್ಯಾಳ್ಯದಲಿ ನೋಡಿ । ನಾವು ಥಳಿಸೀದಕ್ಕಿ ಪಾವನ್ನವಾಗೀ ತ್ವರದಿಂದಾ ॥ ತ್ವರದಿಂದ ನಮ್ಮ ಶ್ರೀ । ಗೋವಿಂದನಶಾಸೀಗೊದಗಲೀ ॥ ೧೪ ॥ ಹೆಚ್ಚಿನಂಬರ ಉಟ್ಟು ಅಚ್ಚಿನಕುಪ್ಪುಸ ತೊಟ್ಟು । ಪಚ್ಚಾದಿರತ್ನಾಭರಣಿಟ್ಟೂ ॥ ಇಟ್ಟು ಸುಸ್ವರಗೈದು । ಅಚ್ಯುತನ ಪಾಡೋರಿನಿತೆಂದೂ ॥ ೧೫ ॥ ಲಕ್ಷ್ಮಿಪತಿಯಾಗಿ ಬಹು । ಮಕ್ಕಳನ ಪಡದಿದ್ಧಿ । ಇಕ್ಕೊಳ್ಳಿ ಈಗಾ ಮುದುವ್ಯಾಕೇ ॥ ಯಾಕೊನತ ಠಾನಂದ । ಉಕ್ಕೀಸುವದಕೆ ರಚಿಸೀದ್ಯಾ ॥ ೧೬ ॥ ಎಂದಾಗೆದೊ ಶ್ರೀ ಮುಕುಂದ ನಿನ್ನಾ ಮದುವಿ । ಹಿಂದಿನಾ ಬ್ರಹ್ಮರರಿತಿಲ್ಲಾ ॥ ರರಿತಿಲ್ಲ ಅವಿಯೋಗಿ । ಎಂದು

ಕರಸುವಳು ಶೃತಿಯೋಳೂ ॥ ೧೭ ॥ ಶೀಲಿಸುಂದರಿ ನಿನ್ನ ಆಳಾಗಿ ಇರುವಳು। ಶ್ರೀ ಲಕ್ಷ್ಮಿ ನೀನು ಸ್ವರಮಣಾ ॥ ಸ್ವರಮಣನಾಗೆವಳ । ವ್ಯಾಲಿ ಮದುವ್ಯಾಕೊ ಭಗವಂತಾ ॥ ೧೮ ॥ ಆರು ಮಹಿಷಿಯರು ಹದಿ । ನಾರು ಸಾವಿರ ವ್ಯಾಲಿ। ನೂರು ನಾರಿಯರೂ ಬಹುಕಾಲಾ ॥ ಬಹುಕಾಲ ಬಯಸಿದ್ದು ಪೂರೈಸಿ ಕೊಟ್ಟ್ಯೋದಯಸಿಂಧೂ ॥ ೧೯ ॥ ವೇಧನೆಂಧಾಪುತ್ರ ವೇದನಂತಾಬಲ್ಲ । ವೋದುವಾನಿರುತಾನಿನ ಪೌತ್ರಾ ॥ ಪೌತ್ರ ನಿಮ್ಮಣ್ಣ । ಸ್ವರ್ಗಾಧಿವತಿ ಎಂದೂ ಕರಸೂವ ॥ ೨೦ ॥ ಜಗವ ಪಾವನ ಮಾಳ್ಪ ಮಗಳೆಂಥ ಗುಣವಂತಿ । ಅಗಣಿತ ಜ್ಞಾನವಂತಾರೋ ॥ ಜ್ಞಾನವಂತರೊ ನಿನ್ನ । ಯುಗಳ ಸೊಸಿಯರೂ ವರ ಮಾತ್ಮಾ ॥ ೨೧ ॥ ಈ ವಸುಧಿಯೊಳಗೆಲ್ಲಾ । ಆವ ಶುಭಕಾರ್ಯಕ್ಕ್ಯಾ । ದೇವೇಶ ನಿನ್ನಾ ಸ್ಮರಿಸೋರೋ ॥ ಸ್ಮರಿಸುವರೊ ನಿನ ಮದುವೀ । ಗಾಂವೀಗ ನಿನ್ನೇ ನೆನವೇವೋ ॥ ೨೨ ॥ ಅಕ್ಲೇಶಾ ಅಸಮಂಧಾ ಶುಕ್ಲಶೋಣಿತದೂರಾ । ಹಕ್ಲಾ ಸುರಾರೀ ದುರಿತಾರೀ ॥ ದುರಿತಾರಿ ಅಸಮನಿ । ನ್ಯೂಕ್ಲಾದ ವರಗಲೀ । ಇರಲಾರೀ ॥ ೨೩ ॥ ವೇದಪೆಂಬದು ಬಿಟ್ಟು । ಭೂದಿವಿಜಾರಮರಾರು । ಮಾಧವನ ಗುಣವಾ ಪೊಗಳೂವಾ ॥ ಪೊಗಳುವಾ ಸುಸ್ವರವಾ । ಶೋಧಿಸೀ ಕೇಳೂತಿರುವಾರೂ ॥ ೨೪ ॥ ಕಾವಾದಿಗಳ ಬಿಟ್ಟು ಸೋಮವರ ರಾಣಿಯರು । ಸ್ವಾಮಿಯ ವಿವಹಾನಾಳೆಂದೂ ॥ ನಾಳೆಂದರಿಷಿಣದಕ್ಕೀ । ಹೇಮಾಧರಿವಾಣಾಕ್ಕಿರಿಸೋರೂ ॥ ೨೫ ॥ ಜಯು ಮತ್ಸ್ಯಾಕೂರ್ಮಾಕಿಟ, ಜಯನರ ಸಿಂಹಾಖುಷಿಜ । ಜಯು ರಾಮಕೃಷ್ಣಾ ಶ್ರೀ ಬುದ್ಧಾ । ಶ್ರೀ ಬುದ್ಧ ಕಲ್ಕಿ ಜಯು । ಜಯು ದತ್ತಾತ್ರಯಾ ಶುಭಕಾಯಾ ॥ ೨೬ ॥ ಆನಂದಾದಿಂದ ಸುರ ಮಾನಿನಿಯಾರಾಡೀದ । ಈ ನುಡಿಯಾ ಪಾಡೀದವರಿಗೇ ॥ ಅವರಿಗಿಹಪರ ದಲ್ಲಿ । ಪ್ರಾಣೇಶವಿಠಲಾ ಒಲಿವೋನೂ ॥ ೨೭ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೬೬. ಪದ, ರಾಗ–ಸಾರಂಗ (ಆದಿತಾಳ).

(ದೇವರನ್ನು ಹಾಸಿಗೆ ಕರದ ಪದಗಳು.)

ವೇದ ಉದ್ಧರಿಸೀದಾ ಮತ್ಸ್ಯಾವತಾರನೇ । ಆದಿತ್ಯಾರಿಗೊಲಿದಮೃತ ನೀಡಿದನೇ ॥ ಮೇದಿನಿಯಾನುಪೊತ್ತ ವರಹನತಾರನೆ । ಆ ದೈತ್ಯನಳಿದು

ಪ್ರಲ್ಹಾದಗೊಲಿದನೇ । ಭೂದೇವಾರೂಪೀ ಹಾಸಿಗೇಳೂ ॥ ೧ ॥ ಭೃಗು ಕುಲೋದ್ಭವನೇ ಭೀಷ್ಮನ ಬೆಳಸಿದನೇ । ನಗಜರಮಣನ ಕಾರ್ಮೂಕ ಮುರಿದವನೇ ॥ ಹಗೆಯುನಳಿದು ಪಾಂಚಜನ್ಯ ಘೊಳಿಸಿದನೆ । ಇಗಡದೈತ್ಯರ ಬುದ್ಧಿ ಭೇದಮಾಡಿದನೇ ॥ ಅಗಣಿತ ಮುಹಿಮಾ ಹಾಸಿಗೇಳೂ ॥ ೨ ॥ ಕುದರೀ ಯೇರಿ ಕುಜನರಾಕುಲತರಿದವನೇ । ಬುಧರಗೋಸುಗ ಹತ್ತಾವತಾರವಾದವನೇ ॥ ಸುದರೂಶನ ಶಂಖಗದಜಲಜಧರನೇ । ವಿಧಿಪಿತ ಶ್ರೀರಮಣ ಪ್ರಾಣೇಶವಿಠ್ಠಲನೆ । ಸುಧಿಗಡಲಾಲಯುನೆ ಹಾಸೀಗೇಳು ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೬೭. ಪದ, ರಾಗ–ಕಲ್ಯಾಣಿ (ಆದಿತಾಳ).

ವಾಸುಕಿ ಶಯುನನೆ ವೆಂಕಟಗಿರಿ । ವಾಸನೆ ಯಜ್ಞಾದ್ಯವತಾರನೆ । ಮೀಶಾನರಸಿಂಹಾ ಹಾಸೀಗೇಳೂ ॥ ಪಲ್ಲ ॥ ಬೊಮ್ಮಾಶಂಕರ ಮುಖವಂದಿತ । ಸಮ್ಮಾರವಾಹನ ಗರುಡಧ್ವಜ । ಅಮ್ಮರೇಶಾನುಜ ಶ್ರೀ ಉಪೇಂದ್ರಾ ॥ ಉಪೇಂದ್ರ ದಾಮೋದರ ಹರಿ । ತಮ್ಮನಾತಮ್ಮ ಹಾಸೀಗೇಳೂ ॥ ೧ ॥ ವಾಮನ ನಾರಾಯುಣ ಅಚ್ಯುತ । ತಾಮುಸಗುಣ ಜನಸಂಹಾರಕ । ಶ್ಯಾಮಾಂಗಕೋಟಿರವಿತೇಜಾ ॥ ರವಿತೇಜಾ ತ್ರೈಲೋಕದ ಗುರು । ಹೇಮಾಂಗದ ವರದಾ ॥ ೨ ॥ ಜಲಜಾಕ್ಷನ ಕೌಂಸ್ತುಭಶೋಭಿತ । ಜಲನಿಧಿಶಯುನನೆ ನರಕಾಂತಕಾ । ಬಲಿಬಂಧಸೀದನ ಪರತತ್ವಾ ॥ ಪರತತ್ವ ರವಿದರ ಗದಧರ । ಫಲುಗುಣನಾ ನಖನೇ ಹಾಸೀಗೇಳೂ ॥ ೩ ॥ ಕನಕಾಂಬಕ ಕಶ್ಯಪುರಿಪುಹರಿ । ಧನವತಿಮಿತ್ರನ ಭಯುಬಿಡಿಸಿದ । ಇನಪುತ್ರಗೊಲಿದಾರಘುಪತೀ ॥ ರಘುಪತಿ ಭಕ್ತಸುರತರೂ । ಮುನಿಜಾಪಿತನೆ ಹಾಸಿಗೇಳೂ ॥ ೪ ॥ ಶತಯಾಗನ ಗರ್ವವಿಭಂಜನ । ಕ್ಷಿತಿವಂದಡ ಮಾಡಿದವನೇ । ಸುತನಲ್ಲ ಪಾಲು ಕುಡಿದಾನೆ ॥ ಕುಡಿದಾನೆ ರುಗ್ಮಿಣಿವಲ್ಲಭ । ಪತಿ ತಾಪಾವನ್ನಾ ಹಾಸೀಗೇಳೂ ॥ ೫ ॥ ಝುಗಝುಗಿಸುವ ಪೀತಾಂಬರ ದುಡಿ । ಗಿಗಳಿಂದಲಿ ಹೊನ್ನುಡಧಾರದಿ । ಮಿಗಿಲಾದ ವೈಜಯುಂತೀ ವನಮಾಲೀ ॥ ವನಮಾಲಿ ಕೊರಲೊಳಗೊಪ್ಪುವ । ಜಗದೇಶ ಕೃಷ್ಣಾ ಹಾಸೀಗೇಳೂ ॥ ೬ ॥ ಗಂಗೆಯು ಚರಣದಿ ಪಡದಿಹ

ಬಹು । ಮಂಗಳಮೂರುತಿ ಶ್ರೀವಾಮನ ಜಂಗುಳಿಹೆಣ್ಣುಗಳಾ ಒಲಿಸೂತಾ ॥ ಒಲಿಸುತಾ ಚಿಂತಿಗಳೆಲ್ಲನು ಹಿಂಗಿಸುವಾ ದೇವಾ ಹಾಸೀಗೇಳೂ ॥ ೭ ॥ ಧ್ರುವದ್ರೌಪದಿಯಸುರಜಪೋಷಕ । ಅವಿವೇಕ ದಶಮುಖವಿನಾಶಕಾ ॥ ಲವಣಾಸುರ ಕಂಸಾ ಮುರಾಧ್ವಂಸೀ ॥ ಮುರಧ್ವಂಸಿ ಐದೊಂದಬಲೆರಾ । ಧವ ವಾಸುದೇವಾ ಹಾಸೀಗೇಳೂ ॥ ೮ ॥ ಕೇಶವ ಸತ್ರಾಯಣ ಸುತ ಪ್ರಾ । ಣೇಶವಿಠ್ಠಲ ದಕ್ಷಿಣ ವಲ್ಲಭ । ದೋಷರಹಿತನೆ ಅನಿರುದ್ಧಾ ॥ ಅನಿರುದ್ಧಾ ಭಾಗವತರಘ । ನಾಶಾವರಮಾತ್ಮಾ ಹಾಸೀಗೇಳೂ ॥ ೯ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೬೮. ಪದ, ರಾಗ–ಪೂರ್ವಿ (ಆದಿತಾಳ).

ಶೋಭಾನ ಪಾಂಡುರಂಗಗೆ । ಶೋಭನ ಶ್ರೀನಿವಾಸಗೆ ಶೋಭನ ಉಡುಪಿನಿಲಯಾಗೇ ॥ ಪಲ್ಲ ॥ ಸುಮನಸರಾಳ್ದವನ ವರಜ ಬಾ । ಕಮಲೆ ಸದನ ಮುಖಕಂಜರವಿ ಬಾ । ವಿಮಲಗುಣಾರ್ಣವ । ನೀಲಜಲದನಿಗಾತ್ರಾ ಬಾ ॥ ವಾರಿಜನೇತ್ರಾ ಬಾ । ಮಂಗಳಸ್ತೋತ್ರಾ ಬಾ । ವಹನ ಪತತ್ರಾ ಬಾ । ನತಜನಮಿತ್ರಾ ಬಾ ಹಾಸೀಯಾ ಜಗುಲೀಗೇ ॥ ೧ ॥ ಅಷ್ಟ ನಾಮ ಒಪ್ಪುವನೇ ಬಾ । ದುಷ್ಟದಿತಿಸುತ ಮದಹರಣಾ ಬಾ । ಮುಷ್ಟಿಕ ಪ್ರಮುಖಹ ಗೋವರ್ಧನಧರ ಕೃಷ್ಣಾ ಬಾ ॥ ಹರಿಗತಕಷ್ಟಾ ಬಾ । ತ್ರಿಜಗಜ್ಜ್ಯೇಷ್ಟಾ ಬಾ । ಅಕ್ಷರಜೇಷ್ಟಾ ಬಾ । ನಿರುತವಿಶಿಷ್ಟಾ ಬಾ । ಹಾಸಿಯಾ ಜಗುಲೀಯಾ ॥ ೨ ॥ ಮಾತುಳರಿಪುವನ ಅನಳ ಬಾ । ಶ್ವೇತವಹನ ರಥಸಾರಥಿ ಬಾ ॥ ಮಾತಿ ಶಿರ ಕಡಿದು, ಬಾಹುಜರೊರಸಿದನಾಥಾ ಬಾ ॥ ಗೋಕುಲತ್ರಾತಾ ಬಾ । ಲೋಕೈಕ ದಾತಾ ಬಾ । ವಸುದೇವಜಾತಾ ಬಾ । ಸುಪ್ರಖ್ಯಾತಾ ಬಾ । ಹಾಸೀಯಾ ಜಗೂಲೀಗೆ ॥ ೩ ॥ ವಾಮನಕೇಶವ ಹಯಮುಖ ಬಾ । ಭೀಮಪಿನುತಸಿಃಸೀಮಾ ಬಾ । ಕಾಮಿಸಿಯರ ಚೈಲಹರಣ, ಋಷಿ, ರಣಭೀಮಾ ಬಾ ॥ ದಶರಥರಾಮಾ ಬಾ । ಬಾಣವಿರಾಮಾ ಬಾ । ಅಜಮುಖನಾಮಾ ಬಾ । ಕೃಷ್ಣಾಪ್ರೇಮಾ ಬಾ । ಹಾಸೀಜಗುಲೀಗೇ ॥ ೪ ॥ ಕಂದರ್ಪಜನಕ ನರಹರಿ ಬಾ । ಅಂದಮೃತವ ತಂದವನೇ ಬಾ । ಮಂದೇತರಮುದ ಘಟಜಪ್ರಮುಖ ಮುನಿ

ವಂದ್ಯಾ ಬಾ ॥ ಕಸ್ತುರಿಥಂದಾ ಬಾ । ದೇವಮುಕುಂದಾ ಬಾ । ದೇವಕಿಕಂದಾ ಬಾ । ಸದ್ಗುಣವೃಂದಾ ಬಾ । ಹಾಸೀಯಾ ಜಗುಲಿಗೇ ॥ ೫ ॥ ಕ್ಷಿತಿಧರಜಿನ ಧರಸಖನೇ ಬಾ । ಅತುಳಮಹಿಮನೆ ಅಜಿತನೇ ಬಾ । ಸತಿಗಮರಸದನದ ಕುಸುಮ ತಂದಚ್ಯುತನೇ ಬಾ ॥ ಮೂರುತಿಸುತನೆ ಬಾ । ಲೋಕವಿತತನೆ ಬಾ । ಪೂಜಿಗುಚಿತನೆ ಬಾ । ರಕ್ಷಣರತನೇ ಬಾ । ಹಾಸಿಯಾ ಜಗುಲೀಗೇ ॥ ೬ ॥ ಪ್ರಾಣೇಶವಿಠ್ಠಲರಾಯಾ ಬಾ । ವೀಣಾಪಾಣೀಜನಕನೆ ಬಾ । ಮಾಣದೆ ಭಕ್ತರ ಪೊರವುತಿಹನೆ ಸತ್ರಾಣಾ ಬಾ ॥ ಸತ್ಯಾಪ್ರಾಣಾ ಬಾ । ಶ್ರೀ ಪಾಠೀಣಾ ಬಾ । ನಿಜವಿಜ್ಞಾನಾ ಬಾ । ನಿತ್ಯಕಲ್ಯಾಣಾ ಬಾ । ಹಾಸಿಯಾ ಜಗುಲೀಗೆ ॥ ೭ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೬೯. ಪದ, ರಾಗ–ಪೂರ್ವಿ (ತ್ರಿಪುಡೆತಾಳ).

### ಕಂಕಣ ಕಟ್ಟುವ ಪದ.

ಶೋಭಾನ ಕಾಮಜನಕನಿಗೆ । ಶೋಭನ ಶ್ರೀ ಮಹಾ ಲಕುಮಿಗೆ । ಶೋಭಾನವೆನ್ನೀ ಬುಧರೆಲ್ಲಾ ॥ ಪಲ್ಲ ॥ ಪಾಲಸಮುದ್ರವು ಹೆಣ್ಣಿನ ಮನೀ । ಮೇಲಾದ ದ್ವಾರಕಿ ಗಂಡಿನ ಮನಿ । ಮೂಲೋಕದೊಳಗಿಹ ನಿಬ್ಬಣದವ । ರೋಲಯ ಒದಗೀದಾರು ಶೋಭನೇ ॥ ೧ ॥ ಅಂಬರ ಛಪ್ಪರ ರವಿಚಂದ್ರರು । ಸಂಭ್ರಮತೋರಣಗಳು ಮದುವೀಗೆ । ಇಂಬಾದ ಮೇದಿನಿ ವರದಿಯ ಶ್ಯಾಲಿ । ಹೊಂಬಣ್ಣನ ಗಿರಿಜಗುಲೀ ॥ ೨ ॥ ಆ ಮಹಾ ಸುರರಂಗನಿಯರು ಬಹ । ಆ ಮುದದಲಿ । ಪ್ರಾಣೇಶವಿಠ್ಠಲಗೆ । ಶ್ರೀ ಮಾಯಾದೇವಿಗೆ । ಕಂಕಣ ನೇಮಿಸಿ ಕಟ್ಟಿದರೂ ॥ ಶೋಭನ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೭೦. ಪದ, ರಾಗ–ಶಂಕರಾಭರಣ (ಏಕತಾಳ).

### ಶ್ರೀ ದೇವರ ಊಟಣೀ ಪದ

ಜಯತೂ ರುಗ್ಮಿಣಿಕಾಂತಾ । ಜಯತೂ ಕಂಸಕೃತಾಂತಾ । ಜಯ ಜಯತೂ ಧೀಮಂತಾ । ಜಯಸಿಕ್ಷಿಂತಾ ॥ ಪಲ್ಲ ॥ ಖಳರಾಬಾಧಿಗೆ ಭೂಮಿ । ಲಲನೇ ಗೋರೂಪದಲಿ । ನಳಿನಾಪೀರನಕೂಡಿ ಬಿನ್ನೈಸಲು ಕೇಳಿ ॥ ೧ ॥ ತ್ರಿಗುಣಾ ವರ್ಜಿತವಾದಾ । ಯುಗವಂದೂಮಾತ್ಮಕಥಾ । ಮಗಳಲ್ಲಿದ್ದಾ

ಉತ್ಸಹ ತೋರುವೆ ಜಗತಿಯೊಳೆಂದೂ ॥ ೨ ॥ ವಾರಿಧಿಯಾ ಮಧ್ಯದಲೀ । ದ್ವಾರಕಿಯಾ ವಿರಚಿಸೀ ॥ ಕ್ರೂರಾ ದೈತ್ಯರಗೆಲಿದು ರುಗ್ಮಿಣಿಯಾ ತಂದೂ ॥ ೩ ॥ ನಿತ್ಯದಲಿ ಅವಿಯೋಗಿ । ಸತ್ಯಾವಾದರು ಶ್ರೀಶಾ ॥ ಮತ್ತೂ ಹಮ್ಮು ತಲೀವಿವಾಹ ಮನುಜಾರಂತೇ ॥ ೪ ॥ ಬ್ರಹ್ಮಾದಿ ನಿರ್ಜರರಾ । ಸುಮ್ಮ ನದಿ ಕರಿಸಾಲೂ ॥ ವಮ್ಮೇಲೆ ಬಂದರು ತಮ್ಮಯು ಸ್ತ್ರೀಯರ ಕೂಡೀ ॥ ೫ ॥ ನಿತ್ಯಾನಂದಗೆ ಮದುವೀ । ಮತ್ತೆಲ್ಲೀದೀಗವ್ಮಾ ॥ ಮೊತ್ತಕೆ ಸಂತೋಷವ ಮಾಡಲು ರಚಿಸಿದನೀಗಾ ॥ ೬ ॥ ಆವಾವಾ ಕಾಲದಲೀ । ಆವಾ ಪುಣ್ಯದ ಫಲವೂ ॥ ಆವಲ್ಲಿಂದೊದಗಿತೊ ಇಂದಿಗೆ ಬಹು ಮುದವೆಂದೂ ॥ ೭ ॥ ಸರ ಸ್ವತಿ ಭಾರತಿ ಶಚಿಯೂ । ಗಿರಿಜೆ ವಾರುಣಿಯು ಸೌ ॥ ಪರಣೀ ಗಂಗಾದಿ ಗಳೂ ಶುಭದಿನದಲ್ಲೀ ॥ ೮ ॥ ಗುರು ಆಜ್ಞಾದಲಿ ಕಲ್ಲೂ । ಒರಳೂ ಪೂಜೆಯು ಮಾಡೀ ॥ ಸ್ವರಗೈದು ಪಾಡಿದರೆಲ್ಲರು ಸುವ್ವೀ ಎಂದೂ ॥ ೯ ॥ ಮರುತಾ ದೇವರು ಹರಿಯಾ । ಪುರವಾ ಶ್ರಿಂಗರಿಸೀದಾ ॥ ಶರಧೀಜಾದಿತ್ಯರು ತೋರಣ ಕೊಪ್ಪಿದರಾಗಾ ॥ ೧೦ ॥ ಚಿತ್ರಾವೇದಿಕದಲ್ಲಿ । ಸಪ್ತಾ ವಾಹನ ಹರಿಯಾ ॥ ಮುತ್ತೈದೇರೆಲ್ಲರು ಕರದರು ಶೋಭಾನೆಂದೂ ॥ ೧೧ ॥ ಶಂಖಿಣಿ ಪದ್ಮಿಣಿಯರು ವಸ್ತ್ರಾ । ಲಂಕರದಿಂ ಶ್ರಿಂಗರಿಸಿ ಅರಿಶನ ॥ ಕಂಕಣಧಾರಗಳನು ಕಟ್ಟಿದರೂ ವೆಂಕಟಗಿಂದಿರಿಗೇ ॥ ೧೨ ॥ ಮಾಂಗಲ್ಯತಂತೂ ನಾನೆ ನಂಬೀ । ಮಂಗಳ ತರ ವಾಕ್ಕ್ಯಗಳಿಂದಾ ॥ ಮಂಗಳಸೂತ್ರ ಸುಕರಿಮಣಿ ಕಟ್ಟಿದ ಮಂಗಳೆಗೀಶಾ ॥ ೧೩ ॥ ಬಳಿಕಾಲಾಜಾಹೋಮಾ । ಗಳು ವಿಧ್ಯೋಕ್ತದಿ ಮಾಡಿ । ಜಲಜಾ ನಾಭನಿಗೆ ಭೂಮವ ಬಡಿಸಿದರಾಗಾ ॥ ೧೪ ॥ ಆ ತರುವಾಯದಲಿ ದೇ । ವಾ ತರುಣೀರೆಲ್ಲಾರೂ ॥ ಸೂತವಕಾಡಿಂದಲಿ ಬನ್ನಿರಿ ಊಟಣಿಗೆಂದೂ ॥ ೧೫ ॥ ಸ್ವರ್ಣದ ಬಟ್ಟಲದೊಳಗೇ । ಎಣ್ಣೀ ಅರಿಶನವನು ಕಲಿಸೀ ॥ ಚನ್ನೆಭಾರತಿ ಕರಿಸಿದಳಾನಂದಾದಿಂದಾ ॥ ೧೬ ॥ ಸೂರುತಿಸೀರಿ ಕೆಲರೂ । ಸಾರಾವಾಳೀ ಕೆಲರೂ ॥ ಚ್ಯಾರು ವಸ್ತ್ರಗಳನ್ನೂ ಉಟ್ಟರು ಸ್ತ್ರೀಯರು ಬ್ಯಾಗಾ ॥ ೧೭ ॥ ಕಂಚುಕ ತೊಟ್ಟರು ಬಿಗಿದೂ । ಮಿಂಚುವ ವಸ್ತಗಳಿಟ್ಟೂ ॥ ಕುಂಚಿಗಿ ಬಾಲಕ ರನ್ನೂ ತಮ್ಮಯ ಕೊಂಕಳೋಳಿಟ್ಟೂ ॥ ೧೮ ॥ ವರುಷಾಕಾಲದ ನದಿಯಂತೆ । ಹರು ಷುಬ್ಬಿ ಬಂದಾರೂ ॥ ಸರಸೀಜಾಕ್ಷನು ರಮೆಮಾಡುವ ಊಟಣಿ

ನೋಡಾ ॥ ೧೯ ॥ ಗಿರಿಜೆ ಬಟ್ಟಲು ಪಿಡಿದೂ । ಶಿರಿಯಾ ಮುಂದಕೆ ಕರದೂ ॥ ಸರುವೇಶಾಗೂಟಣಿ ಮಾಡೆಂದರಿಶನ ಕೊಡಾಲೂ ॥ ೨೦ ॥ ತುಂಗಾವಿ ಕ್ರಮ ಹರಿಯೇ । ಶ್ರಿಂಗಾರಾಂಬುಧಿಯೇಕಾ ॥ ಳಿಂಗನ ಮರ್ದಿಸಿದಂಥಾ ಕಾಲ್ಕೊಡು ಅರಿಶನ ಹಚ್ಚೂವೇ ॥ ೨೧ ॥ ಒದಗೀದಾ ಖಳಗಂಜೀ । ಎದಿಗೊಟ್ಟೊ ನಿಲ್ಲ ದಲೇ ॥ ಹದಿನ್ಯೋಳಾವತ್ರ್ಯೊರ್ಗದಿದ ಪದಕೊಡು ಅರಿಶಿನ ಹಚ್ಚೂವೇ ॥ ೨೨ ॥ ಆ ಪಾರ್ಥನ ತೇರಿನ ಹಗ್ಗಾ । ನಿ ಪಿಡಿಯೆ ಕುದರಿ ಖುರಧೂಳೀ ॥ ಲೇಪಿಸಿ ದಂಥಾ ಮುಖ ಕೊಡು ಅರಿಶನ ಕುಂಕುಮ ಹಚ್ಚೂವೇ ॥ ೨೩ ॥ ಜನನೀಯಾ ಮೊಗನೋಡೂತಾ । ವಿನಯದಲಿಂಜುರುಜುರು ಮೆಲುತಾ ॥ ಸ್ತನ ಪಿಡಿದಾಡಿದ ಕರ ಯುಗವನೆ ಕೊಡು ಗಂಧವ ಹಚ್ಚೂವೇ ॥ ೨೪ ॥ ತುಂಬೀದಾ ಕೌಂಸ್ತುಭ ಕಾಂತೀ । ಗಿಂಬಾಗೀ ತೋರಿಸುವಾ ॥ ಕಂಬೂ ಕಂಧರವನೆ ಕೊಡು ಪದ್ಮದ ಮಾಲಿಕಿ ಹಾಕೂವೇ ॥ ೨೫ ॥ ಅಂದೀ ವರಿಯಿಂದರ್ಚಿಸೀ । ಹೊಂದೀ ಕುಳ್ಳಿರೆ ಗಿರಿಜೇ ॥ ಮಂದಾರೋದ್ಧರ ಊಟಣಿ ಮಾಡೇಳೆಂದಾಳೂ ॥ ೨೬ ॥ ಇಂದಿರೇ ಬಲುಸುಂದಾರ । ಚಂದೀರಾಸ್ಯನ್ನರಸೀ ॥ ಮಂದಸ್ಮಿತ ಮುಖವನು ಕೊಡು ಅರಿಶನ, ಕುಂಕುಮ ಹಚ್ಚೂವೇ ॥ ೨೭ ॥ ಮುನಿಸುಡಿಗೆ ಮರುಳಾಗೀ । ಎನ ಬಯಸೀ ಕಣ್ಣಿಸ ಅಂ ॥ ಜನದಿಂ ಪತ್ರವ ಬರದಿಹ ಕರಕೊಡು ಗಂಧವ ಹಚ್ಚೂವೇ ॥ ೨೮ ॥ ಅರಸೂ ನೇಮಿಸಿದಂಥಾ । ಧೊರೆಗಳ ವಂಚಕಳೆಂಬಾ ॥ ಹರಲೀಯಾ ಹೊತ್ತಿಹ ಶಿರವನೆ ಕೊಡು ನಾ ನೂಸುಕ ಮುಡಿಸೂವೇ ॥ ೨೯ ॥ ಪಾಕೀಕೊಟ್ಟು ಚೇಳು ಬೇಕೆಂದು ಕಚ್ಚಿಸಿಕೊಂಡಂತೇ ॥ ಕಾಕು ಮಾತುಗ ಳಾಡೀ ಎನ್ನಿಂದಾಡಿಸಿಕೊಂಡೀ ॥ ೩೦ ॥ ಎನುತಾ ಗಂಧಾದಿಗಳೂ । ವನಿತಿಗೇ ಉಪಚರಿಸೀ ॥ ಅನಿಮಿಷೇಶನು ಕುಳಿತನು ಸಂತೋಷದಿ ಪೀರದಲೀ ॥ ೩೧ ॥ ಅಂಬೂಜಾಕ್ಷನ ತೊಡಿಯಲ್ಲೀ । ಅಂಬೀಯಾ ಬರಿ ಎಂದೂ ॥ ಜಗ । ದಂಬಿ ಯಾ ನಿಲ್ಲಿಸಿ ಬರಸಿದರೆಲ್ಲರು ಕೂಡೀ ॥ ೩೨ ॥ ಬಂಧಕ ಶಕುತೀಯಾಲಿಂದಾ । ಇಂದಿರಿಯಾ ಮೋಹಿಪ ಗೋ । ವಿಂದಗೆ ಕಂಚುಕ ಗ್ರಂಥಿಯ ಬಿಚ್ಚೆಂದಾಡಿದ ರೆಲ್ಲಾ ॥ ೩೩ ॥ ಲೋಕವತೂ ಲೀಲಾಕೈವಲ್ಯಂ । ಶ್ರೀಕಾಂತಾನರರಂತೇ ॥ ತಾ ಕಂಚುಕ ಬಿಚ್ಚಿಟ್ಟನು ಪದದಡಿ ಸೀಕೊಳ್ಳೆಂದೂ ॥ ೩೪ ॥ ನಖಮುಹಿಮೆರಿ ಯುದವಳು ನಿನ್ನಾ । ಅಕಳಂಕಡಿಗಳೆತ್ತುವಳೇ ॥ ಸುಕರುಣಡಲಿ ಕೊಡು

ಭೃತ್ಯಳಿಹಳು ನಿನಗೆಂದಳು ಗೌರೀ ॥ ೩೫ ॥ ಸರ್ಪ ಶಕಟ ಪೂತನಿ ಪ್ರಮುಖರ ಭಯ । ಕ್ಷಿಪ್ರ ಕಳದು ಬಹು ಮೆರದವಗೇ ॥ ಉಪ್ಪಕ್ಕಿಗಳು ನಿವಾಳಿಸುತಿ ಹರಿದು ಸೋಜಿಗವಲ್ಲೀ ॥ ೩೬ ॥ ಪೂಗೀಫಲತಾಂಬೂಲವನೂ । ಆಗೊರ ಕನ್ನಿಕಿಗಳು ಮೆಮ್ದೂ ॥ ಈಗಿನ ಜನ ಮಾಡಿದ ತೆರ ಲೀಲಿಯ ಮಾಡಿದರಾಗಾ ॥ ೩೭ ॥ ಪಾವಕನೆಲ್ಲವು ಉಂಬಾ । ತಾ ವರ್ಣಾವಿಕಾರಾಗಹರೀ ॥ ಆವನ ಚಾರಿಯು ಫಲ ಭಕ್ಷಿಸಿದವಗೀದೋಷಗಳುಂಟೇ ॥ ೩೮ ॥ ಯಿನಿತೂ ಸ್ತೋತ್ರವ ಮಾಡೀ । ಅನಿಮಿಷರಾ ರಾಣಿಯರೂ ॥ ಮಣಿಮುತ್ತಿನ ಆರುತಿ । ಎತ್ತಿದರತಿ ಸಂಭ್ರಮದಿಂದಲ್ಲೀ ॥ ೩೯ ॥ ಉರುವಶಿಯರು ನಲಿದಾಡುವರು । ಸುರರು ಸುಮನ ಮಳೆ ಸುರಿಸುವರೂ ॥ ಮೊರಿಯಲು ದುಂದುಭಿ ನಭದಲಿ ನಾರದಮುನಿ ಕುಣಿದಾಡುತಿರೇ ॥ ೪೦ ॥ ಮಂಗಳ ಝುಷಕೂರ್ಮಕಿಟನರಸಿಂಹಗೆ । ಮಂಗಳ ವಟುಭಾರ್ಗವದಾಶರಥಿಗೇ ॥ ಮಂಗಳ ಕೃಷ್ಣಜಿನಜ ಹಯವಹನಗೆ ಮಂಗಳ ಪದಗಳಿಗೇ ॥ ೪೧ ॥ ವ್ಯಾಸೋಕ್ತಿಗಳಲಿ ಬಹಳುಂಟಾದದು । ನಾಶಕುತಿದ್ದಷ್ಟೇಳಿದೆನೀಕಥಿ । ದೋಷಿರೆ ಕ್ಷಮಿಸಿ ಗ್ರಹಿಸತಕ್ಕದು ಕೇತಕಿಯಂತೆ ಸುಜನರೂ ॥ ೪೨ ॥ ಪ್ರಾಣೇಶವಿಠಲನ ಊಟಣಿಪದವನು । ಸಾನುರಾಗದಲಿ ಕೇಳ್ದರಿಗೇ ॥ ಏನು ಬೇಡಿದಿಷ್ಟಾರ್ಥವ ಕೊಡುವನು ಇಹ ಪರದಲ್ಲೀ ॥ ೪೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೭೧. ಪದ, ರಾಗ–ಕಾಂಬೋಧಿ (ಆದಿತಾಳ).

ಉಡಿ ತುಂಬುವ ಪದ.

ಶೋಭನ ಶ್ರೀನಾರಾಯಣಗೆ ಇಂದಿರಿಗೇ । ಶೋಭನ ಕ್ಷೀರಾಬ್ಧಿನಿಲಯಗಂಭೃಣಿಗೇ । ಶೋಭನ ಕೃಷ್ಣಗೆ ಭೀಷ್ಮಕುವರಿಗೇ । ಶೋಭನ ದಶರಥರಾಮಜಾನಕಿಗೆ । ಶೋಭನವೆನ್ನೀ ಬುಧರೆಲ್ಲಾ ॥ ಪಲ್ಲ ॥ ಜ್ಞಾನಿ ವಶಿಷ್ಟಾಮುಖ್ಯಾ ಋಷಿ ಬ್ರಹ್ಮಾದಿಗಳೂ । ವಾಣೀ ಭಾರತಿ ಗೌರಿ ಪ್ರಮುಖನಾರಿಯರೂ ॥ ಕ್ಷೋಣಿಯೊಳಗೆ ಮಿಗಿಲಾದ ಸಂಭ್ರಮದಿಂದಾ । ಜಾನಕಿಗುಡೀಯಾ ತುಂಬಿದ ಕಥಿಪದವನು । ಧೇನಿಸಿ ಪಾಡುವದು ಪ್ರತಿದಿನಾ ॥ ೧ ॥ ಸರಸ್ವತಿ ಪಾರ್ವತಿ ಕೂಡಿ ಇಂದಿರಿಗೇ ಸರುವಾಭರಣ ಶ್ರಿಂಗರಿಸಿ ತವಕದಲೀ ॥ ಇರಸೀ

ತಟ್ಟೆಯೊಳು ಮುತ್ತು ಮಾಣಿಕ ಪ್ರವಾಳಾ । ಹರಿಗರ್ಪಿಸೀ ಮೂಲೋಕಾ ಜನನಿಯ ಮುಂದಕೆ । ಕರದು ತುಂಬಿದಾರು ಉಡಿಯೊಳು ॥ ೨ ॥ ವಾರುಣೀ ಸೌಪರಣೀ ದೇವಿಯರೊದಗೀ । ಸೂರುತಿ ಉಡುಸಿ ಚಿನ್ನದ ಬಟ್ಟಲೊಳಗೇ । ನಾರಿಕೇಳದಾಳಿಂಬುನಿಂಬಿಕದಳಿಫಲಾ ॥ ನಾರಾಯಣಗರ್ಪಿಸಿ ಉಡಿಯಾ ತುಂಬಿದರು । ಮಾರಾಜನನೀಗೆ ಜಯವೆಂದೂ ॥ ೩ ॥ ಉತ್ತಮ ಶಚಿದೇವಿ । ದಿವ್ಯಾಂಬರುಡಿಸೀ । ಕಿತ್ತಳಿ ಜಂಬು ದ್ರಾಕ್ಷ ಚೂತಫಲಗಳೂ ॥ ಉತ್ತುತ್ತಿ ತಾಂಬೂಲ ಪೂಗಿಫಲಗಳನ್ನೂ । ಸಪ್ತವಾಹನಗರ್ಪಿಸ್ಯುಡಿಯ ತಿಂಬಿದಳು । ಸತ್ಯಾಭಾಮಿನಿಗೆ ಶುಭವೆಂದೂ ॥ ೪ ॥ ಧಿಟ್ಟಾಂತಕನ ರಾಣೀ ಚಿನ್ನದಾಂಬ ರವಾ । ಧಟ್ಟಾನುದಸಿ ನಾನಾ ಜಾತಿ ಪುಷ್ಪಗಳಾ ॥ ಘಟ್ಟತಂಡೂಲ ಸಾವೀರ ಹೊನ್ನು ಬೆರಸಿ ಉಡಿ । ಘಟ್ಟ್ಯಾಗಿ ಬಿಗಿ ಎಂದು ತುಂಬಿದಳೂ । ಪ್ರಾಣೇಶ ವಿಠ್ಠಲಗರ್ಪಿಸುತಾ ಶುಭವೆಂದೂ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

---

## ವಿವಾಹ ಮಂಗಳಾರ್ತಿ ಪದಗಳು.

೧೭೨. ಪದ, ರಾಗ–ಕಲ್ಯಾಣಿ (ತ್ರಿಪುಡೆತಾಳ).

ಕರಿವರದಗೆ ಹರಿಯರ್ಧಾಂಗಿಗೆ । ಸುರರಂಗನಿಯರು ಬಹು ಹರುಷದಿ । ನೆರದು ಆರುತಿಯ ಬೆಳಗೀರೆ । ಶೋಭನವೇ ॥ ಪಲ್ಲ ॥ ರಾಮಗೆ ದಶರಥನಂದಗೆ ಸು । ಧಾಮುನ ಸಖಮಧುಮುರಭಂಜಗೇ ॥ ಶ್ರೀಮಾಯಾ ದೇವಿಗೆ ಹರುಷಾದಿ । ಹರುಷದಿ ಮುತ್ತಿನ ಆರುತಿ ಭಾಮಿನಿಯೇರೆಲ್ಲಾ ಬೆಳಗೀರೆ ॥ ೧ ॥ ನಾರಾಯಣ ಅಚ್ಯುತ ಕೃಷ್ಣಗೇ । ಪಾರಶರನಾಸುತ ವ್ಯಾಸಗೇ । ಕ್ಷಿರಾಬ್ಧಿಸುತಿಗೆ ಹಿತದಿಂದಾ ॥ ಹಿತದಿಂದ ಹವಳದ ಆರುತಿ । ನಾರಿಯರು ತಂದು ಬೆಳಗೀರೆ ॥ ೨ ॥ ಕೇಶವಗೆ ತ್ರಿವಿಕ್ರಮನಿಗೆ ಶ್ರೀ । ವಾಸುಕಿಶಯನಗ ಅನಿರುದ್ಧಗೇ । ದೋಷವಿರಹಿತೆ ಲಕುಮಿಗೆ ॥ ಲಕುಮಿದೇವಿಗೆ ಆರುತಿಯನು । ಭೇಶಾಮುಖಿಯರು ಬೆಳಗೀರೆ ॥ ೩ ॥ ಗಂಗೆಯ ಪಡದಿಹ ಗೋವಿಂದಗೇ । ಅಂಗಜ ಜನಕಗೆ ಪುರುಷೋತ್ತುಮಗೆ । ಮಂಗಳದೇವಿಗೆ

ಸೊಗಸೀಲಿ ॥ ಸೊಗಸೀಲಿ ಮಾಣಿಕದಾರುತಿ । ಅಂಗನಿಯರೆಲ್ಲಾ ಬೆಳಗೀರೆ ॥ ೪ ॥ ಜಂಗಮ ಜಡದೊಳು ವ್ಯಾಪಿಸಿಹಗೇ । ರಂಗಗೆ ಸುತ್ರಿಧಾಮಗೆ ವರದಗೇ । ಇಂಗೀತಜ್ಞಳಿಗೆ ಜಯಂತೀಗೆ । ಜಯಂತೀಗೆ ರತ್ನದಾರುತಿ । ಹೆಂಗಳೆರೆಲ್ಲಾ ಬೆಳಗೀರೆ ॥ ೫ ॥ ವಾರಿಧಿ ಆರೊಂದು ಘನೋದಕ । ಮಿರುತ ವಿಪ್ರನ ಬಾಲಕರನು । ತೋರಿಸಿದವಗೆ ಇಂದಿರಿಗೆ ॥ ಇಂದಿರಿಗೆ ಮಾಣಿಕ ದಾರುತಿ । ನೀರಜಾಕ್ಷಿಯರು ಬೆಳಗೀರೆ ॥ ೬ ॥ ದಾಮೋದರ ಪ್ರಾಣೇಶವಿಠಲಗೆ । ರಾಮನ ಅನುಜಗೆ ಜಗನ್ಮಾತಿಗೇ । ಹೇಮಾಮಯವಾದಾ ಹರಿವಾಣಾ ॥ ಹರಿವಾಣದೊಳು ಶ್ರಿಂಗರಿಸಿ । ಪ್ರೇಮದಲಿ ತಂದು ಬೆಳಗೀರೆ ॥ ೭ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೭೩. ಪದ, ರಾಗ–ಸಾವೇರಿ (ಆದಿತಾಳ).

ವಾಸೂಕಿಶಯನ ಅಶೋಕ ಪರಾಕೂ । ವಾಸುದೇವಾನಿರುದ್ಧ ಶ್ರೀಕೃಷ್ಣ ಪರಾಕೂ ॥ ಸಾಸಿರನಾಮದ ಹರಿಯೆ ಪರಾಕೂ । ದೋಷರಹಿತ ರಘುಪತಿಯೆ ಪರಾಕೆಂದು ಮಿಾಸಲಾರುತಿಯಾ ಬೆಳಗೀರೆ ॥ ೧ ॥ ವೃಂದಾವನದೊಳಗಿಹನೆ ಪರಾಕೂ । ತಂದಿತಾಯ್ಗಳ ಬಿಡಿಸಿದನೆ ಪರಾಕೂ ॥ ಸಿಂಧುರವರದ ಗೋಪಾಲ ಪರಾಕೂ । ಶಿಂಧುಶಯನ ಪದ್ಮನಾಭ ಪರಾಕೆಂದು ॥ ಛಂದದಲಾರುತಿಯಾ ಬೆಳಗೀರೆ ॥ ೨ ॥ ಸತ್ಯಾಭಾಮರುಗ್ಮಿಣಿರಮಣಾ ಪರಾಕೂ । ಮುತ್ಯಗ ಪಟ್ಟಗಟ್ಟಿದವನೆ ಪರಾಕೂ ॥ ಭಕ್ತಪೋಷಕ ತ್ರಿವಿಕ್ರಮನೆ ಪರಾಕೂ । ಸತ್ಯಸಂಕಲ್ಪ ಹೃಷಿಕೇಶ ಪರಾಕೆಂದು । ಮುತ್ತಿನಾರುತಿಯಾ ಬೆಳಗೀರೆ ॥ ೩ ॥ ಮಾಧವ ಖರ ದೂಷಣಾರಿ ಪರಾಕೂ । ಬಾದರಾಯಣ ಪುರುಷೊತ್ತಮ ಪರಾಕೂ ॥ ಯಾದವರೊಳು ಪುಟ್ಟಿದನೆ ಪರಾಕೂ ॥ ವೇದ ಉದ್ಧರ ಮತ್ಸ್ಯರೂಪಿ ಪರಾಕೆಂದು । ಮೋದದಲಾರುತಿಯಾ ಬೆಳಗಿರೇ ॥ ೪ ॥ ಇಂದ್ರಬಲಿಯನುಂಡಾಧೀರ ಪರಾಕೂ । ಕಂದಗೊಲಿದ ನರಸಿಂಹ ಪರಾಕೂ । ನಂದನಂದನ ಶೌರಿ ಪರಾಕೂ ॥ ಮಂದರ ಪರ್ವತಧರನೆ ಪರಾಕೆಂದು । ಕುಂದಣದಾರುತಿಯಾ ಬೆಳಗೀರೆ ॥ ೫ ॥ ಜಟ್ಟೇರ ಹುಡಿಗುಟ್ಟೀದವನೆ ಪರಾಕೂ । ದುಷ್ಟ ಕಂಸನ ತರಿದವನೆ ಪರಾಕೂ ॥ ಕೆಟ್ಟಾಜಾಮಿಳಗೊಲಿದವನೆ ಪರಾಕೂ । ಅಷ್ಟ ಲೋ

ಕವ ಸಲಹುವನೆ ಪರಾಕೆಂದು । ತಟ್ಟೆಯೊಳಾರುತಿಯಾ ಬೆಳಗೀರೆ ॥ ೬ ॥ ಮಾರನಯ್ಯಾ ಪ್ರಾಣೇಶವಿಠಲ ಪರಾಕೂ । ನೀರಜಾಂಬಕ ಶ್ರೀನಿವಾಸ ಪರಾಕೂ ॥ ದ್ವಾರಕಿನಿಲಯ ಮುರಾರೆ ಪರಾಕೂ । ಕ್ಷೀರಾಬ್ಧಿಸುತಿಯ ವಲ್ಲಭನೆ ಪರಾಕೆಂದು । ನಾರಿಯರಾರುತಿಯಾ ಬೆಳಗೀರೆ ॥ ೭ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೭೪. ಪದ, ರಾಗ–ಪೂರ್ಕಿ (ಆದಿತಾಳ).

ಮಂಗಳ ರಾಘವ ಜಾನಕಿಗೆ ಮಂಗಳ ಕೃಷ್ಣಗೆ ರುಗ್ಮಿಣಿಗೇ ॥ ಮಂಗಳ ಋಷಭ ಜಯಂತಿಗೇ ॥ ಶೋಭಾನೆ ॥ ಪಲ್ಲ ॥ ವೃಂದಾವನಪತಿ ಕೇಶವಗೆ । ಮಂದರಧರ ನಾರಾಯಣಗೇ । ಇಂದ್ರಕೃತ್ಯಪರಿಹರ ಮಾಧವ । ಗೋವಿಂದನಿಗೇ ॥ ಸಾಗರನಂದನಿಗೇ । ದೈತ್ಯನಿಕೃಂದನಿಗೇ । ಅಂಡಜಶ್ಯಂದನಿಗಾರುಗಾರುತಿಯಾ ಬೆಳಗೀರೆ ॥ ೧ ॥ ವಿಷ್ಣುಮಧುರಿಪುತ್ರಿವಿಕ್ರಮಗೇ । ಶ್ರಿಷ್ಠಿವಾಮನ ಶ್ರೀಧರಗೇ ॥ ದುಷ್ಟಮದ ಹೃಷಿಕೇಶ ಪ್ರಸಿದ್ಧ ಸುಪರ್ವಲಗೇ ॥ ದೇವೋತ್ಕೃಷ್ಟಳಿಗೇ । ಕನಕೊಸನುಟ್ಟಳಿಗೇ । ವಿಧಿಗೂರಕೂಟ್ಟಳಿಗಾರುತೀಯಾ ಬಳಗೀರೆ ॥೨॥ ಕಂಜನಾಭ ದಾಮೋದರಗೆ । ಕಂಜವರದ ಸಂಕರುಷಣಗೆ । ಕುಂಜರಪಾಲಕ ವಾಸುದೇವ ವಿಷಭುಂಜನಿಗೇ ॥ ನಿತ್ಯನಿರಂಜನಿಗೇ । ಖಳಕುಲಭಂಜನಿಗೇ । ಕುಮುತ್ಯಾಂಧಾಂಜನಿಗಾರುತಿಯಾ ಬೆಳಗೀರೆ ॥ ೩ ॥ ಪ್ರದ್ಯುಮ್ನಗೆ ಅನಿರುದ್ಧನಿಗೆ । ಸಿದ್ಧರೊಡಿಯ ಪುರುಷೋತ್ತಮಗೆ । ಶುದ್ಧ ಅಧೋಕ್ಷಜ ನಾರಸಿಂಹ ಶ್ರೀ ಬುದ್ಧನಿಗೇ ॥ ಸರ್ವದ ಇದ್ದಳಿಗೇ । ದೋಷ ಅಬದ್ಧಳಿಗೇ । ಕುಸುತನಗೆದ್ದಳಿಗಾರುತಿಯಾ ಬೆಳಗೀರೆ ॥ ೪ ॥ ತಂದೆ ಶ್ರೀಪ್ರಾಣೇಶವಿಠ್ಠಲಗೇ । ವಂದ್ಯಾಚ್ಯುತ ಜನಾರ್ದನಿಗೇ ॥ ಇಂದ್ರಪ್ರಕಾಶ ಉಪೇಂದ್ರಗೆ ಹರಿಯದು ನಂದನಗೇ ॥ ಭಾಗ್ಯದ ಇಂದಿರಿಗೇ । ಜಗಕತಿ ಸುಂದರಿಗೇ । ಸರಸಿಜಮಂದಿರಿಗಾರುತಿಯಾ ಬೆಳಗೀರೆ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೭೫. ಪದ, ರಾಗ–ಭೈರವಿ (ಝಂಪೆತಾಳ).

ಜಯಮಂಗಳಂ ನಿತ್ಯ ಶುಭಮಂಗಳಂ ॥ ಪಲ್ಲ ॥ ಶ್ರೀವತ್ಸಲಾಂಛನಗೆ । ಕೌಸ್ತುಭ ಸುಭೂಷಣಗೆ । ಗೋವಿಂದನಿಗೆ ರುಗ್ಮಿಣೀರಮಣಗೇ ॥ ಭಾವಜ

ಪಿತಗೆ ಮಂದರಗಿರಿ ಧರಿಸಿದವನಿಗೆ । ಮೂಂವನಳಿದವನಿಗೆ ಮಧು ಹಿಂಸಕನಿಗೇ ॥ ೧ ॥ ನೀಲಾಂಬುದಾಭಗೆ ಸತ್ಯಭಾಮಿಪತಿಗೆ । ಫಾಲಾಕ್ಷಸಖಗೆ ಪುರುಷೊತ್ತುಮನಿಗೇ ॥ ವಾಲಯು ಸುಗರಿಗಮೃತ ಉಣಿಸಿದವನಿಗೆ । ಕಾಳಿಂಗ ಮರ್ದನಗೆ ಶ್ರೀ ಕೃಷ್ಣಗೇ ॥ ೨॥ ಶಂಕರಾದಿ ಸಮಸ್ತ । ಅನಿಮಿಷಾರಾಧ್ಯನಿಗೆ। ಪಂಕಜೋದ್ಭವನ ಪಿತ ಶ್ರೀ ರಾಮಗೇ ॥ ಕಿಂಕರನ ರೀತಿಯಲಿ ನರನ ರಥವು ನಡಿಸಿದಗೆ । ವೆಂಕಟಗೆ ಪ್ರಾಣೇಶವಿಠ್ಠಲನಿಗೇ ॥ ೩ ॥ ಶ್ರೀ ಮಧ್ವೇಶಾರ್ಪಣ ಮಸ್ತು ॥

೧೭೬. ಪದ, ರಾಗ–ಸೌರಾಷ್ಟ್ರ (ಏಕತಾಳ).

ಗೋಪಾಲಕೃಷ್ಣನಿಗೆ ಮಂಗಳಾ । ಘೋರ । ಪಾಪಾರಣ್ಯ ಧನಂಜಯಗೆ ಮಂಗಳ ॥ ಪಲ್ಲ ॥ ಚಿಕ್ಕನನಾಗಿ ಬಲಿಯ ದಾನವ ಬೇಡಿನೆಲಾ । ಕಿಕ್ಕಿತುಳಿದಂವಗೆ ಮಂಗಳಾ ॥ ಸೊಕ್ಕಿದ ಜಾಂಬುನದಾಕ್ಷನ ಹುಡಿಗುಟ್ಟೇ । ಅಕ್ಕರೆಲ್ಲರಿಗೆ ಮಾಡ್ದಗೆ ಮಂಗಳಾ ॥ ೧ ॥ ಕಿಡಿಯನುಗುಳುತಲಿ ಚಟಚಟ ಕಂಭದಿಂದ । ಒಡದು ಬಂದನನಿಗೆ ಮಂಗಳಾ ॥ ಕಡುಕೋಪದಿಂದ ಶಾತ ಕುಂಭಕಶ್ಯಪುವಿನಾ । ಪಿಡಿದೊಡಲು ಬಗದವಗೆ ಮಂಗಳಾ ॥ ೨ ॥ ನುಡಿಯಲು ಜನನಿಯು ಕೇಳಿ ಪುರವ ಬಿಟ್ಟು ಅಡವಿಗೆ ಪೋದಂವಗೆ ಮಂಗಳಾ ॥ ಮಡದೀಯಾಕೃತಿ ವೈದ ಸುರನ ಕೊಂದವನಿಗೆ । ಕಡಲಾಮಂದೀರನಿಗೆ ಶುಭ ಮಂಗಳಾ ॥ ೩ ॥ ಪಾಷಾಣಳಾದವಳ । ಉದ್ಧಾರ ಮಾಡಿದವಗೇ । ದೋಷರಹಿತನಿಗೆ ಮಂಗಳಾ ॥ ಭೇಶಭಾಸ್ಕರ ಕೋಟತೇಜಪರಿಗೆ ಪ । ರ್ವೇಶ ಮುರಾಂತಕಗೆ ಶುಭಮಂಗಳಾ ॥ ೪ ॥ ಶ್ರೀರಮಣ ಶ್ರೀಮಂತ ಪ್ರಾಣೇಶವಿಠ್ಠಲನೀಗೆ । ವಾರೀಜನಯನಗೆ ಮಂಗಳಾ ॥ ನಾರಾಯಣಗೆ ದಯಸಾಂದ್ರಗೆ ದಶಅವ । ತಾರ ಗೋವಿಂದ ವಾಮನಗೆ ಮಂಗಳಾ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೭೭. ಪದ, ರಾಗ–ಶಂಕರಾಭರಣ (ಅಟತಾಳ).

ಜೋಗುಳ ಹಾಡು ತೊಟ್ಟಿಲ ಪದ.

ಜೋಜೋ ವೃಷ್ಣಿ ಕುಲಾಂಬುಧಿ ಚಂದ್ರಾ । ಜೋಜೋ ಚಿತ್ಸುಖ ಬಲಗುಣಸಾಂದ್ರಾ । ಜೋಜೋ ಭಕ್ತೌಘ ದೋಷಾಹಿವೀಂದ್ರಾ । ಜೋಜೋ ಅಸು

ರಾರಿ ಹರಿದಿವಿಜೇಂದ್ರಾ॥ ಪಲ್ಲ ॥ ಮಧ್ವಮುನಾಬ್ಜ ಮಂಟಪದಲ್ಲಿ ಶೋಭಿಪ । ಶುದ್ಧಮಾತ್ಮಕ ಹೇಮ ನಿರ್ಮಿತ ತೊಟ್ಟಿಲ ॥ ಮಧ್ಯ ಶ್ರೀ ಸಹಿತ ಉಯ್ಯಾಲಿ ಯನಾಡುವ । ಸಿದ್ಧಾರರಸ, ವೇದ ವೇದ್ಯ ಕೇಶವನೇ ॥ ೧ ॥ ಶಿರಿ ವಿಧಿ ಶಿವ ಶಕ್ರ ರವಿಶಶಿ ಮೊದಲಾದ । ಸುರರೆಲ್ಲ ಕಲ್ಪಕಲ್ಪದಲಿ ಮಾಡಿದ ಸೇವೆ । ಚರಣಕಮಲಕರ್ಪಿಸಿದ ರುಚಿನೋಳ್ಪಂತೆ । ಜುರುಜುರುಂಗುಟ ಮೆಲುತಿಹ ಮುದ್ದುಕೂಸೇ ॥ ೨ ॥ ಅನ್ನಾಜ ಪ್ರಣಾಜ್ಯ । ಶಿವ ದಿವಿಜರ ಶಾಖ । ವನ್ನು ಬೊಮ್ಮಾಂಡಾಖ್ಯ ಹರಿವಾಣದೊಳಗೇ ॥ ಚನ್ನಾಗಿ ಲಲನಿಸಹಿತವಾಗಿ ಭುಂಜಿಸಿ । ನುಣ್ಣಾನ ವಟಪತ್ರಶಾಯಿಕೃಪಾಂಗಾ ॥ ೩ ॥ ವೇ ದನಗೋದ್ಧಾರಿ ಕೋಲನರಹರೀ । ಭೂದಾನ ಬೇಡ್ದರೇಣುಕ ರಾವಣಾರೀ ॥ ಯಾದವ ಪತಿ ಬುದ್ಧ ವಾಜೀಯನೇರಿ । ಮೇದಿನಿಯಾಳ್ದ ಸುಜನರುಪಕಾರೀ ॥ ೪ ॥ ಮಾನಿ ಮಾನಿದ ಬಕಶಕಟಾದಿ ಕಾಲಾವಿ । ತಾನ ನಂದನ ಕಾಳಿ । ಕುಂಜರಪಾಲಾ ॥ ಭಾನುಶತಾಭ ಗೋಪಾಂಗನಲೋಲಾ । ಸ್ಥಾಣು ಮೋಹಿಸಿದಾ ಶ್ರೀಪ್ರಾಣೇಶವಿಠಲಾ ॥ ಜೋಜೋ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## (೨೪). ಬೋಧಪರ ಕೀರ್ತನಗಳು.

### ೧೭೮. ಪದ, ರಾಗ–ಮೋಹನಕಲ್ಯಾಣಿ (ತ್ರಿಪುಡೆತಾಳ).

ಮನವೆ ಸ್ಮರಿಸೊ ಕಂಡ್ಯಾ ಹರಿಯಾ । ಶ್ರೀ ರೂ । ಗ್ಮಿಣಿನಾಥಾ ಭಕತರ ನೆಂದೆಂದು ಮರಿಯಾ ॥ ಪಲ್ಲ ॥ ಮರುಳೆ ಕೇಳಿದನಾನವರತಾ । ಹಿಂದೆ । ಯರಳಿ ಜನ್ಮವ ತಾಳಿ ಬಂದಾನಾ ಭರತಾ ॥ ಧರವೆ ವಿಷಯಾಪೇಕ್ಷನಿರುತಾ । ನೀ ಎಚ್ಚರಿದು ಪೂಜಿಸೊ ತಾನೆ ವಲಿವಾ ಶ್ರೀ ಭರತಾ ॥ ೧ ॥ ಒಡಲು ನಿಶ್ಚಯ ವೆನ್ನ ಬ್ಯಾಡೋ । ಧರ್ಮಾ । ತಡಿಯಾದೆ ಹಗಲಿರಳೆನ್ನದೆ ಮಾಡೋ । ಕಡು ತ್ಯಾಗಿ ರವಿಜಾನ ನೋಡೊ । ಭೀಮಾ । ನುಡಿದಾ ಧರ್ಮಜಗಾದಾಲೋಚನೆ ಮಾಡೋ ॥ ೨ ॥ ಕುಲಗುರು ಸುಖತೀರ್ಥರೆಂದೂ । ಸ್ಪಷ್ಟಾ ತಿಳಿದು ಪ್ರಾಣೇಶಾ ವಿಠ್ಠಲನಂಘ್ರಿ ಪೊಂದೂ ॥ ಹಲವು ದೋಷಾ ಪೋಪವು ಬೆಂದೂ ॥

ಶಿರಿ । ನಿಲಯಾ ಕೊಡುವ । ನಿನ್ನಾಬಯುಕೀಯು ತಂದೂ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೭೯. ಪದ, ರಾಗ–ಸೌರಾಷ್ಟ್ರ (ಆದಿತಾಳ).

ಆದದ್ದಾಯ್ತಿನ್ನಾದರು ವಳ್ಳೇ । ಹಾದಿ ಪಿಡಿಯೊ ಪ್ರಾಣೀ ॥ ಈ ದುರ್ನಡತಿಂಧೋದರಿಹವರದಿ । ಮೋದೆಂದಿಗು ಕಾಣೀ ॥ ಪಲ್ಲ ॥ ನೆಲಾ ಸತೀಧನ । ದೊಳಾನವರತಾ । ಹುಳಾಗಿ ಇರುವೆಲ್ಲೋ । ಹಲಾ ಪಿಡಿದು ವಿಧಿಕುಲಾಚರಣೆ ಬಿಡೆ । ಪಲಾ ತಗುವರಲ್ಲ್ಯೋ ॥ ಸ್ಥಳಾಸ್ಥಳರಿಯದೆ ಕಲಾಪವಮಾಡೆ ಘು । ಚೂಳಾಗುವದು ಸಲ್ಲೋ । ಎಲಾ ಕೇಳುವಂತಿಲಾ ಮಾತ್ರ ನೀ । ಗೆಲಾಪಬಗೆ ಇಲ್ಲೋ ॥ ಪ್ರಾಣಿ ॥ ೧ ॥ ಶಿಲಾದಿ ವಿಗ್ರಹ । ಧಳಾನೆ ಹರಿಯುಂಬೆಲಾ ಕೇವಲ ಸುಳ್ಳೋ । ಚಲಾಪ್ರತಿಮಿ ಪದ । ಗಳಾರ್ಚಿಸದಲೆ । ಮಲಾಕಿನುತಿಹ್ಯಲ್ಲೋ ॥ ಕಳಾ ಬಿಡದಿರೆ ಅ । ನಿಳಾನ ಹರಿಮುನಿ ಮೊಳಾಗಿಹದಲ್ಲೋ । ನಳಾಭರತ ಮುಖ । ಇಳಾಣ್ಮರಂದದಿ । ಭಲಾಯುನಿಸಲಿಲ್ಲೋ ॥ ೨ ॥ ಬಿಲಾನೇರಿತಲ್ಲಿ । ಕೆಳಾಗಿ ತಪಿಸಲು । ಫಲಾಲೇಸಿತಿಲ್ಲೋ । ಖಳಾರಿದಿನ ಬಿಂಜಲಾ ಕೊಳ್ಳೆನಂ । ಛಲಾ ಮಾಡಲಿಲ್ಲೋ ॥ ಬಲಾದರದಲಿಂ । ತುಲಾದಿ ಸ್ನಾನ ಮೊದಲಾದ ವೃತವಲ್ಲ್ಯೋ । ಬಲಾರಿನುತ ಪ್ರಾಣೇಶವಿಠ್ಠಲನ ಬಲಾ ಘಳಿಸಿಕೊಳ್ಳೋ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೮೦. ಪದ, ರಾಗ–ರೇಗುಪ್ತಿ (ಅಟತಾಳ).

ವ್ಯರ್ಥ ವೈಷ್ಣವನಂತೆ ನೋಡಿ ಶೋಣಿತ ಪೂಯು । ಗರ್ತದೊಳಗೇ ಪೋಗಿ ಬೀಳಬೇಕಯ್ಯೋ ॥ ಪಲ್ಲ ॥ ಮಧ್ವರಾಯರ ನೂರು ಕಲ್ಪಸಾಧನ ನಾಮ ॥ ಬುದ್ಧಿವಂತರಿಂದ ತಿಳಿಯಲಿಲ್ಲಯ್ಯೋ ॥ ೧ ॥ ಪ್ರಾಣಯಾಮವು ಮೂರೊಂದಾಶ್ರಮವು ಆಚಮಾನ॥ ಮಾಡುವ ವಿಧಿ ತಿಳಿಯಲಿಲ್ಲಯ್ಯೋ ॥ ೨ ॥ ಪ್ರಾಣೇಶವಿಠಲೊಂದು ಮೂರು ರೂಪದಿ । ಯಮ ॥ ಸೂನುಯೆಂತಾದನೆಂದ । ರಿಯಲಿಲ್ಲಯ್ಯೋ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ೧೮೧. ಪದ, ರಾಗ–ಶಂಕರಾಭರಣ (ಅಟತಾಳ).

ಕೆಡುಬ್ಯಾಡ ಕಡುಬ್ಯಾಡವೆಲ ಪ್ರಾಣೀ। ಇನ್ನು ಬಿಡು ನಿನ್ನ ದುರ್ಬುದ್ಧಿ ಕಡಿಗಾಣೀ ॥ ಪಲ್ಲ ॥ ಸತ್ಯ ಮೂರು ಮಾತು ಕೇಳಲ್ಯಾ । ಜ್ಞಾನ । ಭಕ್ತಿ ವೈರಾಗ್ಯ ಘಳಿಸು ಕಾಲಾ ॥ ವ್ಯರ್ಥ ಕಳಿಯದೆ ದಿನದ ಮಾಲಾ । ವನ್ನು ಮೃತ್ಯು ಎಣಿಸುವದು । ತಿಳಿ ಮೂಲಾ ॥ ೧ ॥ ಚೇತಾನವಂದೆನ್ನ ಬಾರದೇ । ಜೀವ । ಆತೂಮುವೆಂದ್ಯರಡಿಹ್ಯದೋ ॥ ಸೀತೇ ಸಮಾಸಮುವೆಂಬೊದೊ । ನ್ಯೂನ । ಧಾತಾದಿಗಳು ಎಂದು ತಿಳಿವೋದೋ ॥ ೨ ॥ ಮಧುರಿಪು ಸ್ವಾತಂತ್ರಾಧೀಗುಣಾ। ಜೀವತದಧೀನ ಸ್ವಾತಂತ್ರ ವರ ಕಾಣೋ ॥ ಮದಡಾರ ಮಾತಲ್ಲಾ ಶೃತಿಗಾನಾ । ಮಾಡು । ತಿದೆ ಬಿಡು ನಿನ ಮತದಭಿಮಾನಾ ॥ ೩ ॥ ತಿಳಿಸಾದೆ ಜಡಚೇತನಗಳಲ್ಲೀ । ಶಿರಿ । ನಿಲಯುಸಿಹದು ನೋಡು ಮನದಲ್ಲೀ ॥ ಜಲಧಿಯೊಳಿಹ್ಯ ನದಿ ತರದಲ್ಲೀ । ಈ ಪಲವು ಜಗತ್ತಿಹ ಧರಿಯಲ್ಲೀ ॥ ೪ ॥ ಶೇವ್ಯ ಪ್ರಾಣೇಶವಿಠ್ಠಲ ಜಿತಾ । ಕಾಮ । ನವ್ಯಕ್ತ ಮಹಿಮೆ ಅಪರಿಮಿತಾ ॥ ಸವ್ಯಸಾಚಿಗೆ ಭಗವದ್ಗೀತಾ । ಕಶ್ಚಿನ್ಮಾಂವೇತ್ತಿ ತತ್ವಾತ ಯೇನದೆತಾ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ೧೮೨. ಪದ, ರಾಗ–ಭೈರವಿ (ಝಂಪೆತಾಳ).

ಹರಿಭಕ್ತರಾದವರಿಗಾವ ಭಯುವೇನೋ । ಪೊರೆವ ಅವರನು ತಾನೆ ಕ್ಷಣಕ್ಷಣದಲೀ ॥ ಪಲ್ಲ ॥ ವಾರುಣೇಂದ್ರನು ಮಡುವಿನೊಳಗೆನಕ್ರನಬಾಧೆ। ಗಾರದಲ ಕೂಗಲಾಕ್ಷಣ ಕರುಣದೀ ॥ ಶ್ರೀರಮಣ ತವಕದಲಿ ಬಂದು ಆ ದುರಿತವನು । ತಾರಿಸಿ ಸುಗತಿ ಕೊಟ್ಟದ್ದಿಲ್ಲ ನೋಡಿ ॥ ೧ ॥ ಅರಗಿನಾಲಯದಲ್ಲಿ ಕುಂತಿ ತನಯರ ಪೊಗಿಸಿ । ಉರಿ ಇಕ್ಕ ಕೌರುವರು ಕಪಟದಲ್ಲೀ ॥ ಉರುಗಶಯನನ ಕರುಣ ಪೂರ್ಣವಿದ್ದದರಿಂದ । ಹೊರಹೊರಟು ಬಂದು, ಬದುಕಿದರು ಕೇಳೀ ॥ ೨ ॥ ಧರಿಪತಿಯು ಕುವರನ್ನ ಶಂಖಲಿಖಿತರು ಕೂಡಿ । ಮರಳುವಾ ತೈಲದೊಳು ಹಾಕಲವನೂ ॥ ಸುರವಂದ್ಯ ಪ್ರಾಣೇಶವಿಠ್ಠಲನೆ ಎನಲಾಗಿ । ಪರಮ ಥಣ್ಣೀರಾಯಿತೆಣ್ಣೆ ನೋಡೀ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ೧೮೩. ಪದ, ರಾಗ–ಕಾಂಬೋಧಿ (ಆದಿತಾಳ).

ನಂಬು ಹರಿಯ ಪಾದವಾ । ಮನವೆ । ಹಂಬಲಿಸದೆ ಹಲವಾ । ಮನವೆ ನಂಬು ಹರಿಯ ಪಾದವಾ ॥ ಪಲ್ಲ ॥ ಸತಿಸುತ ರುಣಲೆಂದು । ಆಸಿಗೆ । ಸತತ ಹಾಕುವಿ ತಂದೂ ॥ ಮತಿಯೆ । ಯಮನು ಕೊಂದು ವೈತಿರೆ । ಸತಿ ಬಿಡಿಸೂಳೆ ಬಂದು ಮನವೇ ॥ ೧ ॥ ಧರಣಿ ವೆಗ್ಗಳ ಘಳಿಸೀ । ಬಹುದಿನ ಇರುವೆನೆಂಬುವೆ ಬಯಸೀ ॥ ಧರಿಯುಲರು ಪೂರೈಸೀ । ದರೆ ಸುಮ್ಮ । ನಿರು ಮಾಧವನ ಸ್ಮರಿಸಿ ಮನವೇ ॥ ೨ ॥ ಧನ ಸಂಪಾದಿಸ ಬ್ಯಾಡೋ । ಖಳ ಸುಯೋಧನನು ಯೇನಾದ ನೋಡೋ ॥ ಘನ ಮಹತ್ಮರ ಕೂಡೋ । ಪ್ರಾಣೇಶವಿಠಲನ ನಿರುತ ಪಾಡೋ ಮನವೆ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ೧೮೪. ಪದ, ರಾಗ–ಅಪರಿ (ಝಂಪೆತಾಳ).

ಸತತ ಹರಿ ಸ್ಮರಿಸುತಿರಬೇಕು ಮನವೇ । ಇತರ ಚಿಂತಿಗಳು ಗಣಿಸದಲೆ ಇರಬೇಕೂ ॥ ಪಲ್ಲ ॥ ಸತಿಸುತ ಬಳಗವನ್ನು ಪಾಲಿಸುತಲಿರಬೇಕು, ಸತತ ಮಾಡುವದೆಲ್ಲ ಸ್ವಾಮಿ ಸೇವೆನಬೇಕು । ಅತಿಥಿಗಳು ಬರಲು ಕರದು, ಉಣಿಸುತಿರಬೇಕೂ ॥ ಮತಿಹೀನರ ಸಂಗಬಿಡಬೇಕು । ಮೂಜಗತ್ಪತಿಯಾಜ್ಞದವರು । ಶ್ರೀಪ್ರಮುಖರೆನಬೇಕೂ ॥ ೧ ॥ ಗುರುಹಿರಿಯರ, ಚರಣಕ ಬಾಗ ನಡಿಯಲಿಬೇಕು । ಪರಮ ವೈಷ್ಣವರ ಗೆಳೆತನವ ಮಾಡಲಿಬೇಕು ॥ ಪರವಾದಿಗಳ ಮತವ ನಿಂದಿಸುತಲಿರಬೇಕು । ವರಮಂತ್ರಗಳು ಜಪಿಸಬೇಕೂ ॥ ತನು ನಿಮಿಷ ಸ್ಥಿರವಲ್ಲವೆಂದು ನಿಶ್ಚಯ ತಿಳಿಯಬೇಕೂ ॥ ೨ ॥ ಪ್ರಥಮ ಚರಣದಲಿ ಗುರುಕುಲವಾಸವಿರಬೇಕು । ದ್ವಿತಿಯದಲಿ ಹರಿಸುರಾರ್ಚನಿ ಮಾಡಲಿಬೇಕು ॥ ತೃತಿಯದಲಿ ತೀರ್ಥಯಾತ್ರಿಗಳ ಚರಿಸಲಿಬೇಕು । ಚತುರ್ಥದಲಿ ಹರಿಸ್ಮರಿಸಬೇಕೂ । ವರುಷ । ಶತ ಹೀಗೆ ಸತ್ಕರ್ಮದಲಿ ಕಳಿಯಬೇಕೂ ॥ ೩ ॥ ಮಾನಾಪಮಾನಾದಿ ಸಮನ ತಿಳಿಯಲಿಬೇಕು । ಜ್ಞಾನಿಗಳು ಮನುಜರಲ್ಲೆಂದು ಪೂಜಿಸಬೇಕು । ಶ್ರೀನಿವಾಸನ ರೂಪವೈಕ್ಯ ಚಿಂತಿಸಬೇಕು ॥ ಹೀನಗುಣವನು ಬಿಡಲಿಬೇಕೂ । ಭಗವಂತ । ಏನು ಕೊಟ್ಟದೆ ಪರಮ ಸೌಖ್ಯವೆನಬೇಕೂ

॥ ೪ ॥ ಹೇಮಲೋಷ್ಟಾದಿಗಳು ಸಮನೋಡಲಿಬೇಕು । ಶ್ರೀ ಮಧ್ವಮುನಿ ಮತಕೆ ಸರಿಯಿಲ್ಲವೆನಬೇಕು । ಶ್ರೀ ಮಾಧವನ ದಿನದಿ ಉಪವಾಸವಿರಬೇಕು । ರಾಮಕಥಿಯನೆ ಕೇಳಬೇಕೂ ॥ ಸತತ ನಿ । ಷ್ಠಾನು ಪ್ರಾಣೇಶವಿಠ್ಠಲನು ಎನಬೇಕೂ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೮೫. ಪದ, ರಾಗ–ಕಾಂಬೋಧಿ (ಝಂಪೆತಾಳ).

ಹರಿಹರೀ ಎಂದು ಅನವರತ ಸ್ಮರಿಸೋ ॥ ನರವಿಷಯಲಂಪಟವ ಮುಂಚೆ ತ್ಯಜಿಸೋ ॥ ಹರಿ ॥ ಪಲ್ಲ ॥ ಹೋಮಾನ್ನದಿಂದುದಸಿ । ವನಚರಿಸಿ, ಕಪಿನೆರಸಿ । ಕಾಮಿನಿಯ ಕೊಂದು ಶರನಿಧಿಯ ದಾಟೀ ॥ ತಾಮರಸ ಮುಖಿಯ ಸಂತೋಷಬಡಿಸುತ ಎಲ್ಲ । ತಾಮಸರ ಸದಬಡಿದು । ಅಸುರಗೊಲಿದಾ ॥ ೧ ॥ ಬಲಿ ತಿಂದ, ಪುವು ತಂದ, ವಿಷ ಉಂಡ, ಮಡು ಬಿದ್ದ । ತುಳಿದ ಸರ್ಪನ, ಶರಿಯ ವರ, ಬಿಡಿಸಿದಾ ॥ ಖಳ ಬಕನ ಕೊಂದರಸಿ ಊಳಿಗವಮಾಡಿ ಶಿಶಿ । ಕುಲದೊಳವತರಿಸಿ । ಧಾರುಣಿ ಸಲಹಿದಾ ॥ ೨ ॥ ಯತಿಯಾದ ಪ್ರಾಣೇಶ ವಿಠ್ಠಲನ ದ್ವಿಜವರಗೆ ಸುತನಾಗಿ ಸದ್ಗ್ರಂಥ ವಿರಚಿಸಿದನಾ ॥ ಧೃತ ಕಮಂಡುಲ ದಂಡ, ಕಾಷಾಯ ಬದರಿಯಲಿ ಸತತ ನಿಲಿಸಿಹ ಜಗಚ್ಛ್ರೇಷ್ಟರಾದಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೮೬. ಪದ, ರಾಗ–ಭೈರವಿ (ಝಂಪೆತಾಳ).

ಭಯ ಉಂಟೆ ಮನುಜ ಶ್ರೀಪತಿಯೆ ಗತಿಯೆಂದವರಿಗೆ । ಪಯಗಡಲ ನಿಲಯ, ಭಕತರ ಮರಿಯನೂ ॥ ಪಲ್ಲ ॥ ದಂಡು ಬಹು ಬರಲಿ, ತನುರೋಗದಲಿ ಬಳಲಲೀ । ಕಂಡು ಪಬ್ಬರು ಮಾತನಾಡದಿರಲೀ ॥ ಹೆಂಡತಿಯು ತುಚ್ಛ ಮಾಡಲಿ ಮಗನು ಬೊಗಳಲೀ । ಕೆಂಡತೃಣನ್ಯಾಯ ಹರಿಸ್ಮರಣಗಿನಿತೂ ॥ ೧ ॥ ಅರಸುಗಳು, ಕೋಪಿಸಲಿ ಪರುಷಗಳು ತಡಿಯಲೀ । ಹರಿದು ವ್ಯಾಘ್ರಗಳು ವ್ಯಾಳೆ ಹರಿದು ಬರಲೀ ॥ ಉರುಗ ನಿರ್ಜರವದನ ಚೋರ ಭಯ

ವಾಗಲೀ । ಶರಧಿಋಷಿನ್ಯಾಯು ಅನಘನ ಸ್ಮರಣೆಗೇ ॥ ೨ ॥ ಗ್ರಾಸದೊರ ಕದಲಿರಲಿ । ಬಂಧುಗಳು ಜರಿಯುಲೀ । ನಾಶವಾಗಲಿ ಘಳಸಿದಂಥ ಬದುಕೂ ॥ ಶ್ರೀಶ ಪ್ರಾಣೇಶವಿಠ್ಠಲನೆ ನೀ ಗತಿ ಎನಲು । ವೀಶಾಹಿನ್ಯಾಯು ಈ ಭಯ ಗಳೆಲ್ಲಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೮೭. ಪದ, ರಾಗ–ಭೈರವಿ (ಝಂಪೆತಾಳ).

ಹುಚ್ಚು ಸೇರಿತೆ ನಿನಗೆ, ಮುಂದಮತಿ ಮನವೆ ಕೇಳೂ ॥ ಎಚ್ಚರಿಕೆ ಇಲ್ಲಿ ಶೃತಿಸಾರುತಿಹದೂ ॥ ಪಲ್ಲ ॥ ಪರಮಾತ್ಮ ಆವಾಗ ಏನು ಮಾಡುವನೊ ಯಮ । ಗರಿಕಿಲ್ಲವೆಂಬುವರು ಬ್ರಹ್ಮಮುಖರೂ ॥ ಬರಿದೇ ನೀ ಸದನಸುತಿ ಸುತರು ಎನ್ನವರೆಂದು । ಕರಕರಿಗೆ ವಳಗಾಗಿ । ಕೆಡುತಿಹಲೊ ವ್ಯರ್ಥಾ ॥ ೧ ॥ ಈ ತನವು ನಚ್ಚಬಾರದು ನೀರಗುಳ್ಳಿಯಂ । ದೂ ತುಚ್ಛಮಾಡುವರು ಕವಿ ಗಳೆಲ್ಲಾ ॥ ಪ್ರೀತಿಯಿಂದಲ ಅಶನ ಉಂಡು ನೊಕ್ಕಿದೆ ಒಮ್ಮೆ । ಸೋತೆ ಉಪ ವಾಸದಲಿ । ಎಂದು ಮಿಡುಕುತಿಯುಲವೊ ॥ ೨ ॥ ಹಿಂದಿನವಗುಣವು ಪೋಗಲಿ ಶುದ್ಧ ಭಕುತಿಯುಲಿ । ಇಂದು ಪ್ರಾಣೇಶವಿಠ್ಠಲನ ಪಾದಾ ॥ ವಂದಿಸುತ ದುರ್ವಿ ಷಯದಾವೇಕ್ಷ ಜರಿದು ದ್ವಿಜ । ನಂದನನ ಸ್ನೆಹ ಸಂಪಾದಿಸುತ್ವರಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೮೮. ಪದ, ರಾಗ–ವರಾಳಿ (ಅಟತಾಳ).

ನಾಲಿಗಿದ್ಯಾತಕೆ ಲಕುಮಿಲೋಲನ ನೆನಿಯದೆ । ಮೂಲೋಕದೊ ಡಿಯಾ ಕೇಶವನ ಗುಣ । ತಿಳಿದು ಸತತ ಸ್ಮರಣೆ ಮಾಡದೇ ॥ ಪಲ್ಲ ॥ ಅಜ ಶಿವಾದಿ ದಿವಿಜರಿಂದ । ಭಜಿಸಿಕೊಂಬ ಅಖಿಲ ಮಹಿಮ । ತ್ರಿಜಗ ಕ್ಷಣಕೆ ಸ್ವೇಚ್ಛೆಯಿಂದ । ಸೃಜಿಪನೆಂದು ಸ್ಮರಣೆಮಾಡದೇ ॥ ೧ ॥ ಮ್ಯಾಲಿನೇಳು ಲೋಕ ಕಳಗಿ । ನೇಳು ಲೋಕ ನಮ್ಮ ಹರಿಗೆ ॥ ಸ್ಥೂಲ ರೂಪವೆಂದು ವೇದ । ಪೇಳುವವೆಂದು ಸ್ಮರಣೆ ಮಾಡದೇ ॥ ೨ ॥ ಉರಗಪರ್ವತದಲಿ ನಿಂದು ।

ಧರಣಿಯೊಳಗೆ ಭಕತಜನಕೆ ॥ ಕರದು ಕೊಡುವ ಪ್ರಾಣೇಶವಿಠಲ । ವರವು ಯಂದು ಸ್ಮರಣಿ ಮಾಡದೇ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೮೯. ಪದ, ರಾಗ–ಭೈರವಿ (ಝಂಪೆತಾಳ).

ಹರಿಯನ್ನಬಾರದೆ । ಎಲೆ ಮನವೆ ಆವಾಗಲೀ । ಮರಳೊಂದು ವಿಷಯದಾವೇಕ್ಷ ತೊರದೂ ॥ ಪಲ್ಲ ॥ ಸಂಸಾರವೆಂಬುವದು ದುಃಖಸಾಗರವೊ ವಂ। ದಂಶವಾದರು ಸುಖವು ಇದರೊಳಿಲ್ಲಾ ॥ ಹಿಂಸಿಸಿಕೊ ದುರ್ಗುಣವ ಇಂದಿನಾರಭ್ಯ ನೀಃ । ಸಂಶಯದಿ ಸಜ್ಜನರ ಸಂಗ ಪಿಡಿದೂ ॥ ೧ ॥ ತನುವು ಸ್ಥಿರವಲ್ಲ ದಾನವ ಮಾಡುವದಕರ್ಥ । ಕ್ಷಣಮಾತ್ರಕಾಲಸ್ಯ ಮಾಡಸಲ್ಲಾ ॥ ಧನ ಮನವು ಯಿದ್ದಾಗೆ ಸತ್ಪಾತ್ರರಿಗೇವೆ ಕೊಡು । ನಿನಗತಿಗೆ ಪಾಥೇಯನೆಂದು ತಿಳಿದೂ ॥ ೨ ॥ ಶ್ರೀಕಾಂತ ಪ್ರಾಣೇಶವಿಠಲ ಮೆಚ್ಚೂವಂತೆ । ನೂ ಕುದಿನ ಸುಖದುಃಖ ಸಮನ ಮಾಡೀ ॥ ಈ ಕುಸರರನ್ನ ಸೇವಿಸದೆ ಸದ್ಭಕ್ತಿಯಲಿ । ಶ್ರೀ ಕಾಳಿಕಾಂತನೇ, ಮುಖ್ಯ, ಗುರುವೆಂದೂ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೯೦. ಪದ, ರಾಗ–ಭೈರವಿ (ಅಟತಾಳ).

ಯಾಕೆ ಸಾಧುಗಳ ಸೇವಿಸಲೊಲ್ಲೀ ॥ ಸಾಕುವರೆ ಕಾಕುಮನವೆ ॥ ಪಲ್ಲ ॥ ನಿರುತ ಮನಸಿನಲ್ಲಿ । ಹರಿಪಾದ ಕಮಲವ ॥ ಸ್ಮರಿಸುವರಿರಲಾಗಿ । ಮರಳೊಂದು ಕ್ಷೇತ್ರ ॥ ೧ ॥ ಬಲ್ಲೀದ ಮುಷ್ಟೀಕ । ಮಲ್ಲಾರಿ ಮಹಿಮಿಯ ॥ ಬಲ್ಲಾವರವಯವ ಎಲ್ಲರಂತೇ ॥ ೨ ॥ ಶಿರಕಾಸಿ, ಗಯಾನೇತ್ರ । ವರ ಕಾಂಚೀ ನಾಸೀಕ ॥ ಶರಣಾರ ವದನವೇ । ಶಿರಿ ಜಗನ್ನಾಥಾ ॥ ೩ ॥ ಹೃದಯಾವೆ ವೈಕುಂಠ । ಉದರ ಶ್ವೇತದ್ವೀಪ ॥ ಪದ ಸರ್ವಪುಶೇಷಾ । ಸದನವು ಕೇಳೋ ॥ ೪ ॥ ಪ್ರಾಣೇಶವಿಠಲಾನ । ಧ್ಯಾನಾವ ಮಾಳ್ಪಾರ ॥ ಮಾನವರೆಂದರೇ । ಹೀನ ಗತಿಯೋ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೯೧. ಪದ, ರಾಗ–ವಸಂತಭೈರವಿ (ಅಟತಾಳ).

ಸೊಕ್ಕಿಲಿ ಇರಬ್ಯಾಡವೆಲ ಹುಚ್ಚಪ್ರಾಣೀ । ಸೊಕ್ಕೀಲಿ ಇರಬ್ಯಾಡಾ ॥ ಪಲ್ಲ ॥ ಧೊರಿತನ ಬಂದಾಗ ಕೇವಲ ಬಡವರ ಕರಕರಿಬಡಿಸುವಿ ತಿಳಿಯದಲೇ ॥

ಸ್ಥಿರವಲ್ಲ ಸೌಭಾಗ್ಯ ಪೋಗಲು. ಬಳಲುತ । ತಿರಿಕಿಯುಬೇಡೂವದಿಟ್ಟಹೆದೆಲ ವೋ ॥ ೧ ॥ ಪ್ರಾಯದ ಕಾಲಕ್ಕ ಮದದಿಂದ ತಿರಗುವೀ । ತಾಯಿತಂದಿ ಗುರುಗಳು ಯನದೇ ॥ ಕಾಯ ಮುಪ್ಪಾಗಲು ಮುನುಗುತ ಮೂಲಿಗೆ, ಬಾಯಿ ಮುಚ್ಚಿಕೊಂಡು ಬೀಳುವ್ಯೊ । ಮರುಳೇ ॥ ೨ ॥ ಇಪ್ಪತ್ತುಸಾವಿರ ಹೊನ್ನಿನ ಬಿಗಿವಿಲಿ, ವಪ್ಪಿಲ್ಲದುರಿವಿ ಆ ಧನವು ಕಾಳೀ । ದರ್ಪಹ ಪ್ರಾಣೇಶವಿಠಲನ್ನ್ಯ ರಿಗೆ ಕೊಡೆ । ಲಪ್ಪಯಮ್ಮ ಎಂದು ಹೊಡಕೊಂಬಿ, ಮರುಳೇ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೯೨. ಪದ, ರಾಗ—ವರಾಳಿ (ಅಟತಾಳ).

ಬಳಸ ಬ್ಯಾಡಿರೊ ಇಂಥ ಖಳರ ಸ್ನೇಹವಾ । ಹಲವು ಬಗೆಯಿಂದ ನೋಡಿ । ತಿಳಿದುಕೊಂಡು ಬಾಳಿರೆಣ್ಣ ॥ ಪಲ್ಲ ॥ ಖಿನ್ನರಾಗಬ್ಯಾಡಿ ಮುಂದೆ । ಯನ್ನ ಕಾರ್ಯ ಬರಲಿ ನಿಮ್ಮ ॥ ನುನ್ನ ತರನ ಮಾಳ್ಪೆನೆಂದು ಅನ್ನ ಕಳವ ಸಾಪಿ ಕೂಡ ॥ ೧ ॥ ಮೊದಲ ಸ್ನೆಹಕಿಂದು ನಮ್ಮ । ಕಧಿಕ ಪ್ರಾಪ್ತಿ ಆಹದೆಂದು ॥ ಒದಗಿ ಬಂದವರಿಗೆ ಊರ । ಕದಕೆ ಅಪ್ಪಣಿಲ್ಲವೆಂಬ ॥ ೨ ॥ ಕಲುಷನಾಶ ದ್ವಿಜರ ಪಾದ । ನಳಿನ ಪಾಂಸುಸ್ಪರುಶವೆಂದು ॥ ತಿಳಿಯದೆಮ್ಮ ಮನಿಯು ಸ್ವಲ್ಪ । ಬಳಿಯ ಗ್ರಹದೋಳಿಹ್ಯದು ಯಂಬ ॥ ೩ ॥ ಹಲವು ಬೇಡಿದದನು ಕೊಟ್ಟು । ಬಲು ಉದಾರಿ ಎಂದು ತೋರಿ ॥ ಶಳದುಕೊಂಬ ಸಕಲ ವಿದ್ದ್ಯ । ಸುಲಿವ ಹಣ ಉಪಾಯದಿಂದ ॥ ೪ ॥ ಕಾಸಿನಾಸಿಗಾಗಿ ಯಿಂಥ । ದೋಷಿ ಸಂಗ ಮಾಡಿ ವ್ಯರ್ಥ ॥ ಮೋಸವಾಗಬ್ಯಾಡಿ ಪ್ರಾಣೇಶವಿಠಲನಂಘ್ರಿ ಭಜಿಸಿ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೯೩. ಪದ, ರಾಗ—ವರಾಳಿ (ಅಟತಾಳ).

ಘಾಸಿ ಮಾಡನು ಯಮನು । ಘಾಸಿ ಮಾಡನೂ ವಾಸುದೇವನಂಘ್ರಿ ಯುಗಳ । ಬ್ಯಾಸರದಲೆ ಭಜಿಸುವರಿಗೆ । ಘಾಸಿಮಾಡನೂ ॥ ಪಲ್ಲ ॥ ಎರಡು ಆರು ಪುಂಡ್ರ ತುಲಸಿ । ಸರಸಿಜಾಕ್ಷಮಾಲಿ ಧರಿಸಿ । ಶಿರಿ ರಮಣನ ಗುಣ ಕಥನವ । ಇರಳು ಹಗಲು । ಸ್ಮರಿಸುವರಿಗೆ ॥ ೧ ॥ ಅಲವ ಬೋಧರುಕ್ತಿಯಂತೆ।

ಬಿಟ್ಟು ಮುದದಿ ಜಾ । ಗರವ ಮಾಡದಲುಂಡು, ವರಗೂವಧಮಗೇ ॥ ೧ ॥ ಹರಿವಾಸರ ವಿನಹಾ । ಸರುವ ದ್ವಾದಶಿ ಪಾರ ॥ ಣೆ ರವಿಯೋದಯು ಕಾಗ । ದಿರುವ ದುರ್ಮತಿಗೇ ॥ ೨॥ ನಾಲ್ವತ್ತೈದು ಘಟ । ವ್ಯಾಲೆ ಕಾದಶಿಯಾಗೆ ॥ ಶ್ರೀಲೋಲವಾಸರಾ । ರೇಳು ಕಳವಂಗೇ ॥ ೩ ॥ ಪ್ರಥಮ ಕಾಲವ ಮಿಾರೆ । ಚ್ಯುತನ ಪ್ರಸಾದವ ॥ ಪ್ರತಿ ದ್ವಾದಶಿಯೊಳುಂಬ । ಮತಿಗೇಡಿಗಳಿಗೇ ॥ ೪ ॥ ದಶಪಂಚವ್ಯಾಲೊಂದು । ದಶಮಿ ಸಿದ್ಧಾಂತ ವೋ ॥ ದಿಸಲು ಶ್ರೀವರನ ದಿ । ವಸ ಹಿಂದಾಗುವಗೇ ॥ ೫ ॥ ವೇಧಿಲ್ಲಾ ದಶಿಮಿಗೆ । ದ್ವಾದಶಿ ಪರದಿನ ॥ ಖ್ವೇದಾರೆ ದ್ವಯ ನಿರ್ಜ । ಲಾದ ವೆನ್ನದೀರೆ ॥ ೬ ॥ ಪಳಾಧಿಕೈವತ್ತೇಳು । ಘಳಿಗಿ ದ್ವಾದಶಿ ವೋದಿ ॥ ನಲು ಸಾಧನಿದು ಎಂದು । ತಿಳಿಯದವನಿಗೇ ॥ ೭ ॥ ದಶಿಮಿಯೋಳ್ ಹತ್ತು ದ್ವಾ । ದಶಿಯೊಳೆಂಟು ಬಿಡಾದೆ ॥ ಪಶುವಿನಂದದಿ ಬಲು । ಹಸಗೆಟ್ಟವನಿಗೇ ॥ ೮ ॥ ಎಲ್ಲಾರು ಸಂದೇಹ । ಉಳ್ಳಾರೆ ಮರುದಿನ ॥ ದಲ್ಲೆ ದಶಿಮಿ ಮಾಡ । ದೊಲ್ಲದಿದ್ದವಗೇ ॥ ೯ ॥ ಅತಿ ಸಾಧನಿರಲು ಆ । ಹುತಿಯನ್ನು ಬಹು ಪೋಷಿ ॥ ಸುತ ಪಾರಣಿಗೆ ಹೊತ್ತು । ವೃಥ ಕಳವವನಗೆ ॥ ೧೦ ॥ ಅನಿವಾರ್ಯ ಬರಲು ಸಾ । ಧನಿಗೆ ತೀರ್ಥವಕೊಂಡು ॥ ಅನುಮಾನ ವ್ಯಾಲೆ । ಭೋಜನಕೆ ಮಾಡುವಗೇ ॥ ೧೧ ॥ ಮಂಕುಬುದ್ಧಿಯಲಿಂದ । ಸಂಕಟಲ್ಲದೆ ತೀರ್ಥ ॥ ಮಂ ಕೊಂಡು ಸಾಧನಿ । ಯಂಕತೋರುವಗೇ ॥ ೧೨ ॥ ಸತಿಗೆ ಶ್ರಾದ್ಧವ ಮಾಳ್ಪ । ಸುತ ಗೊಡಿಯುನ ಸೇವೆ ॥ ರತಗೆ ಸಂಕಟವೆನ್ನದತಿ ಮೂಢ ನರಗೇ ॥ ೧೩ ॥ ಈರಾರುದಿನ ಹದಿ । ಮೂರು ಘಳಿಗಿ ವಿಷ್ಣು ॥ ತಾರವಿದ್ದರೆ ನೀರ । ಹಾರ ಮಾಡದಿರೆ ॥ ೧೪ ॥ ದ್ವಯ ಪಕ್ಷದಲಿ ತಿಥಿ । ತ್ರಯ ಸಮನಾಗೇಪೆ ॥ ಭಯಹಾರ ವ್ರತವೆನ್ನ । ದ ವಿವೇಕಿಗಳಿಗೇ ॥ ೧೫ ॥ ತಿಥಿತ್ರಯದಲಿ ಮಾತು । ಪಿತು ಸ್ವರ್ಗವೈದಾಲು ॥ ರತಿ ಇಂದೋಪನ ವಾಹ । ಪತಿತ ಮಾನವಗೇ ॥ ೧೬ ॥ ಅನಳಗಾಹುತಿ ಶ್ರಾದ್ಧ । ಅನಿಮಿಷಾದ್ವ್ಯರಿಗೆ ತ ॥ ರ್ಪಣ ಕೃಷ್ಣಾಷ್ಟಮಿ ಹರಿ । ದಿನದಿ ಮಾಡುವಗೇ ॥ ೧೭ ॥ ಸಮಿರ ಮತಸ್ಥಾನು । ಅಮರ ಲೋಕ್ಯೈಯದಾರೆ ॥ ವಿಮುಸ್ಥನಿಂದಲಾ । ಕ್ರಮವ ಮಾಡಿಸಿದರೆ ॥ ೧೮ ॥ ದಶಿಮಿ ಶಿವನಿಸಿ ದ್ವಾ । ದಶಿ ಸಾಧನಿಶ್ರಾದ್ಧ ಸಂ । ಧಿಸಿರೆ ವಿಷ್ಣೋಪವಾಸ । ಎಸಗುವವನಿಗೆ ॥ ೧೯ ॥

ಅನಿರುದ್ಧಗರ್ಪಿಸಿ, । ಅನುದಿನದಲ್ಲಿ ಪ್ರಾ । ಣನಿಗರ್ಪಿಸದಲುಂಬ । ಮನುಜಾಧಮಗೇ ॥ ೨೦ ॥ ಪ್ರಾಣೇಶವಿಠಲಾನ । ಧ್ಯಾನದೊಳಿರುತಿಪ್ಪ ॥ ಪ್ರಾಣದೇವರ ಉಕ್ತಿ । ಯಾ ನಂಬದವಗೇ ॥ ೨೧ ॥ ಶ್ರೀ ಮಧ್ವೇಶಾರ್ಪಣಮಸ್ತು ॥

---

## ಉಗಾಭೋಗಗಳು.

೨೨೮. ಮಧ್ಯಮಾವತಿ ಧಾಟಿ (ಝುಂಪೆತಾಳ.)

ಅಲ್ಪ ಧರ್ಮವು ಜ್ಞಾನದಿಂದ ಮಾಡಲು ಬ್ರಹ್ಮ । ಕಲ್ಪ ಪರಿಯಂತ ಸುಖ ಉಂಟು ನರಗೇ ॥ ಸ್ವಲ್ಪೇತರ ತಿಳಿಯದೆ । ಮಾಡಲ್ ಫಲವು ಭುಜಗ । ತಲ್ಪ ಪ್ರಾಣೇಶವಿಠ್ಠಲ ಮೆಚ್ಚನೂ ॥ ೧ ॥

೨೨೯. (ಭಾಮಿನಿಷಟ್ಪದಿ.)

ನಿರುಮಲೋದಕ ಪೆರಿಯೆಲಘುದಶ । ಹರವು ಕ್ಷೀರಕೆ ಶತದಧಿಗೆ ಸಾ । ವಿರ ಮಧುವಿನಿಂಧತ್ತು ಸಾವಿರ ಘೃತಕೆ ಲಕ್ಷಹರಾ ॥ ನೆರೆಗುಡದಿ ದಶಲಕ್ಷ ಟೆಂಗಿನ । ವರಜಲದಿ ಶತಲಕ್ಷ ಗಂಧಜಲೆರಿಯೆ ಪ್ರಾಣೇಶವಿಠಲ ಪಾಪನಾಶನವೂ ॥ ೧ ॥

೨೩೦. ಉಗಾಭೋಗ, (ಭಾಮಿನಿ.)

ನಾಲ್ಕು ಕರ್ಣದೊಳೊಂದು ಮುಖದೊಳ । ಗೇಕ ನಾಭಿಯೊಳೊಂದು । ಶಿರದಲಿ । ಶ್ರೀಕರಾರ್ಚಿತಪದ ಜಲದಿತ್ರಯ ಅನ್ನದೊಳಗೈದೂ ॥ ಹಾಕುವದು ಮೂರ್ಭೋಜನೋತ್ತರ । ಸ್ವೀಕರಿಪದಿಂತಷ್ಟ ದಶದಳ । ಶೋಕಪರ ಪ್ರಾಣೇಶವಿಠಲಗೆ ಅರ್ಪಿಸಿದ ತುಲಸೀ ॥ ೧ ॥

೨೩೧. ಉಗಾಭೋಗ, (ಮಧ್ಯಮಾವತಿ ಧಾಟಿ.)

ಅಪ್ರವಹ ಜಲಸ್ನಾನ ಪಾದಾಭಿಷೇಚನವು । ವಿಪ್ರರಿಗೆ ಗಾಯತ್ರಿ ಅರ್ಘ್ಯವನ್ನೂ ॥ ಅಪ್ರಾಕೃತಾಂಗ ಪ್ರಾಣೇಶವಿಠ್ಠಲನವರು । ಸುಪ್ರಭಾಕರನ ಎದುರಿಗೆ ಮಾಳ್ಪದೂ ॥ ೧ ॥

೨೩೨. ಉಗಾಭೋಗ, (ಭಾಮಿನಿ.)

ಫಣಿಯು ನರಪತಿ ಹುಲಿಯು ಯತಿಯು ಪೋ । ರನು ಪರರ ಜಿಂಹ ಪನು ಕಡು ಮೂ । ರ್ಖನು । ಮಲಗಿರಲೆಚ್ಚರಿಸೆ ಸಲ್ಲ । ಕ್ಷುಧಿತೃಷಿ ಕಾಮಾ ರ್ಥೀ । ಯನು ವಿದ್ಯಾರ್ಥಿಯ ನಿರುತಕೃಷಿ, ಪೊರ । ವನ ಅಡಿಗಿ ಮಾಳ್ಪನ ಘಳಿಗಿ ಬಿಡಿ । ವನ ಎಬ್ಬಿಸಲು ಚಿತನಘ ಪ್ರಾಣೇಶವಿಠಲನಾಳ್ಗಳಿಗೇ ॥ ೧ ॥

೨೩೩. ಉಗಾಭೋಗ, ರಾಗ–ಅಹರಿ (ತ್ರಿಪುಡೆತಾಳ).

ಬಿಳಿಯಾಬಟ್ಟೆಯು ಕೆಂಪು ಡೊಳ್ಳಿನವರು ಬೀದಿ । ಯೊಳು ಬರುತಿರೆ ಕಂಡು ಆತಿಯಿಂದಾ ॥ ಸಲೆ ಲಜ್ಜೆಯನು ತೊರದು ಬೆನ್ನುಬಿಡದಲೆ ಹತ್ತಿ । ಕೊಳಬೇಕು ಫಲಮಂತ್ರಾಕ್ಷತಿಯಾನೆಂದೂ । ಹಲುಬುತ ಕುಣಿ ಕಲ್ಲು ಮುಳ್ಳು ನೋಡದೆ ಓಡೂ । ತಲಿ ಬಂಟರಿಂದಾಗ ತಡಿಸಿಕೊಳುತಾ । ತಿಳಿದು ದಾತನು ತೋರಿದಷ್ಟು ಕೊಟ್ಟಾರೆ ಹಿಗ್ಗಾ । ದಲೆ ಜನ್ಮಾರಭ್ಯದಾ ಕಷ್ಟಾ ಸ್ಮರಿಸೀ ॥ ಘಳಿಕೇನು ವ್ಯಚ್ಚೆನೀಗ್ರುಹಸ್ಥನಲ್ಲಿಹ ದ್ರವ್ಯಾ । ನೆಲಿಯಾ ಬಲ್ಲಿನ್ಯು ವಂದಕ್ಕಧಿಕಾರೆಂದೂ । ಕಲವು ಜನರು ತನ್ನಿಂದಧಿಕಾ ತಂದದು ನೋಡಿ । ಬಲು ನೊಂದವರೀಗೆ ದೋಷಾರೋಪಿಸೀ । ಇಳಿಯೋಳಿಪರಿ ದುರ್ಮಾರ್ಗ ದಲಿಹ ಜನಕ್ಕೆ ನೀ । ನೊಲಿವೊದೆಂತೊ ಶ್ರೀ ಪ್ರಾಣೇಶವಿಠಲಾ ॥ ೧ ॥

೨೩೪. ಉಗಾಭೋಗ, ರಾಗ–ಸಾವೇರಿ (ಅಟತಾಳ).

ವನಹೀನವಾದ ನದಿಗಳಿದ್ದು ವ್ಯರ್ಥಾ । ಧನಹೀನನಾದ ಸಾವಕಾರ ವ್ಯರ್ಥಾ । ತನುಜಾರುಯಿಲ್ಲದ ಮಂದೀರ ವ್ಯರ್ಥ । ಹಣ ವಿಷ್ಣುದ್ರೋಹಿಗೆ ಕೊಟ್ಟದ್ದು ವ್ಯರ್ಥಾ । ಗುಣಹೀನ ಸನ್ನ್ಯಾಸಿ ವಂದನಿ ವ್ಯರ್ಥಾ । ಘನ ಘರ್ಜಿಸಿದರೇನು ಮಳಿ ಇಲ್ಲ ವ್ಯರ್ಥಾ । ಅನಳಾನು ಧೂಮಯುಕ್ತವಾಗೆ ವ್ಯರ್ಥಾ । ಅನಿಮಿಷರಿಗೆ ಮಂತ್ರಹೀನಾಹುತಿಯು ವ್ಯರ್ಥ । ವನುತಿಗೆ ಗಂಡ ಅಂತರಿಸಾಲು ವ್ಯರ್ಥ । ಮನಿತನದಳಿಯನಾಗುವದಂತು ಬಲು ವ್ಯರ್ಥ । ವನಜ ರಹಿತವಾದ ಕಾಸಾರವು ವ್ಯರ್ಥ । ಅನುವಾದ ಮದಹೀನಗಜವಾದರು ವ್ಯರ್ಥ । ಕುಣಿಯುದ ಹಾರದ ಕುದುರಿ ಇದ್ದೂ ವ್ಯರ್ಥ । ಸನುಮತ ಸ್ವರ ಹೀನ ವೇದಪಾಠ ವ್ಯರ್ಥ । ತೃಣಕಂಟಕಯುಕ್ತ ಮಾರ್ಗವಾದರು ವ್ಯರ್ಥ ।

ಮನಸು ಸಮಹೀನವಾದ ಜ್ಞಾನ ವ್ಯರ್ಥ । ಕನಸು ಕಾಸೆಂಬೊದು ಸುಳ್ಳು ಖ್ಯಾತಿ ವ್ಯರ್ಥ । ವಣಡಂಬಕವಾದ ದಾನಧರ್ಮ ವ್ಯರ್ಥ । ಮನಸಿಜಪಿತ ಶ್ರೀ ಪ್ರಾಣೇಶ ವಿಠಲನಂಘ್ರಿಯನು ಸೇವಿಸದ ಬಂದ । ಮನುಜ ಜನ್ಮವು ವ್ಯರ್ಥಾ ॥ ೧ ॥

೨೩೫. ಉಗಾಭೋಗ, ರಾಗ–ಸಾವೇರಿ (ಅಟತಾಳ).

ಪರಸತಿ ಪಡದಮ್ಮನೆಂಬವ ಧನ್ನ್ಯ । ಹರದಿಮಕ್ಕಳನ ಪೋಷಿಸುವವ ಧನ್ನ್ಯ । ಶಿರಿ ಬಂದಿರಲು ನೋಡಿ ನಡದವ ಧನ್ನ್ಯ । ಧರಣಿಸುರರ ಪೂಜಿ ಮಾಳ್ಪನೆ ಧನ್ನ್ಯಾ । ಇರದಂತೆ ಸಂಸಾರದೊಳಗಿಹ ಧನ್ನ್ಯಾ । ಸಿರುತ ಪ್ರಾತಃ ಸ್ನಾನ ಮಾಳ್ಪನೆ ಧನ್ನ್ಯಾ। ತರಣಿಗೆ ಸಭ ಅರ್ಘ್ಯಕೊಡುವವ ಧನ್ನ್ಯ । ಸುರ ಮುಖನಿಗೆ ಉಣಿಸುವನೇವೆ ಧನ್ನ್ಯಾ । ಮರತು ದುರ್ಮತ ನೆನಸದವನೆ ಧನ್ನ್ಯ । ಹರಿದಿನವ್ರುತ ದೃಢನಾದವ ಧನ್ನ್ಯ । ಉರು ಕ್ಷೇತ್ರುಗಳ ಯಾತ್ರಿ ಮಾಳ್ಪನೇ ಧನ್ನ್ಯ । ಪರಪೀಡಿಗಳಿಕಿ ಕೊಂಬುವನೇವೆ ಧನ್ನ್ಯಾ । ಪರ ಕಾರ್ಯಂಗಳಿಗೆ ಸಹಯನಾಹ ಧನ್ನ್ಯ । ಶರಿರಭಿಮಾನವ ಬಿಟ್ಟವನೆ ಧನ್ನ್ಯ । ವರ ಪಂಚಭೇದವ ತಿಳಿದವನೇ ಧನ್ನ್ಯ । ಹರಿಗಿಂದಿರಿಗೆ ಭೇದವೆಂಬವ ಧನ್ನ್ಯ । ಹರಮುಖ್ಯರಲಿ ಭಕ್ತಿಮಾಳ್ಪನೆ ಧನ್ನ್ಯ । ದುರುಳಾ ದೇವರ ಪೂಜಿ ಬಿಟ್ಟಾವ ಧನ್ನ್ಯ । ನರರಿಚ್ಛ್ಯಸಿದೊಸ್ತು ಕೊಡುವವ ಧನ್ನ್ಯ । ಕೊರತಿ ವೃದ್ಧಿಗೆ ಸಮ ನಿಹಾನೆ ಧನ್ನ್ಯ । ಗುರು ಮಧ್ವಾಂತರ್ಗತ ಪ್ರಾಣೇಶವಿಠಲಾನ । ಚರಣ ಕಮಲ ಪೊಂದಿ ಬಾಳ್ವನೆ ಧನ್ನ್ಯಾ ॥ ೧ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೩೬. ಉಗಾಭೋಗ, ರಾಗ–ಅಠಾಣ (ತ್ರಿಪುಡೆತಾಳ).

ಕಡ್ಡಿಮ್ಯೇಯಂದೂ ತುಡುಗು ಹೋಗಾಲರಿಯದಂಥಾ । ದೊಡ್ಡಾ ಆಕಳ ಕರವಾಹಗ್ಗಾದಿಂದಾ ॥ ದುಡ್ಡಿನ ಗಲಾತಾವಿನೊಳಗೆ ಕಂಭಕೆ ಕಟ್ಟೀ । ವಡ್ಡಿಕಾವಲಿಯೊಳು ಮುಂದಿ ಇಟ್ಟಹ್ಯನೂ । ಧಡ್ಡಾನಲ್ಲಾವು ಶ್ರೀ ಪ್ರಾಣೇಶಾ ವಿಠ್ಠಲನಾಟಾ । ಮಡ್ಡಾರರಿಯಾರಿದನೂ ಬಲ್ಲಾರು ಕವಿಗಳೂ ॥ ೧ ॥

೨೩೭. ಉಗಾಭೋಗ, ರಾಗ–ಶಂಕರಾಭರಣ (ತ್ರಿಪುಡೆತಾಳ.)

ಒಂದಾರೊಳೆಂಟಿ ವಂದರೊಳಾ ಘನ್ನೆರಾಡೆನೂ । ವಂದಾರೊಳೆರಡೊಂದೊಂದರೊಳೊಂದೆನೂ । ಇಂದೀರೆ ಶಾರಲ್ಲ್ಯಾವನಾ ವೂದಲಿಹ್ಯರು ಆ । ನಂದ ತೀರ್ಥಾರಾವ ನಾಮುದಲಿಹ್ಯರೂ । ವೃಂದಾರಕರು ಅಲ್ಲೆಲ್ಲಿರುತಿಹರು ಹದಿನೆಂಟೂ । ಮುಂದಿ ಶಿರಿಕೇಶವಾ ಇರುತಿಹರೂ । ಎಂದೂ ತಿಳಿಯುದವ ಬಾಳಲ್ಯಾತಕೆ ಹದ್ದಿ । ನಂದಾದಿ ಬಹುಕಾಲಾ ವ್ಯರ್ಥವಾಗೀ ॥ ಶಿಂಧೂಶಯನ ಶ್ರೀ ಪ್ರಾಣೇಶವಿಠ್ಠಲ್ಲಾ ಅವಗೆಂದೆಂದು ಒಲಿಯಾನು ಕೇಳಿ ನಜ್ಜನರೂ ॥ ೧ ॥ ಶ್ರೀ ಮುಧ್ವೇಶಾರ್ಪಣಮುಸ್ತು ॥

೨೩೮. ಉಗಾಭೋಗ, (ವಾರ್ಧಿಕ.)

ಪದಕಟ ಬೆರಳು ಕಂಠ ಕಿಂವಿ ಪುಬ್ಬು ಸಂಣವಾರು । ಅಧರಕದಪುರದನಖ ಗುಂಹ್ಯದರ ತಿಳುಪಾರು । ಹೃದಯ ಜಘನಾಕ್ಷನಾಸಿಕ ಊರುಕೇಶಗಳಾರು ದೊಡ್ಡವು ಈ ಪರೀ ॥ ಪದಿನೆಂಟು ಶುಭಲಕ್ಷಣಗಳೊಪ್ಪುತಿಹವುದ್ರೌ । ಪದಿಗೆ ಪ್ರಾಣೇಶವಿಠಲನ ಕರುಣಬಲದಿ ಭವ । ವೊದಲಾದವರಿಗೆ ಒಡತಂದಿವಳ ಮುಹಿಮಿ ಬಹು ಶೃತಿಸ್ಮೃತಿಗಳಲಿ ಪೇಳ್ವದೂ ॥ ೧ ॥

೨೩೯. ಉಗಾಭೋಗ, (ಭಾಮಿನಿ.)

ವಾಸುದೇವನು ಶುಕ್ಲ ಶ್ರೀ ಶಾಂ । ತೀಶ ನೀಲಜಯೇಶ ಪಿಂಗಳ । ದೋಷಹರ ಶ್ರೀ ಪ್ರದ್ಯುಮ್ನ ಹರಿತಾಭಾ ॥ ಮೋಶ ನಾರಾಯಣನು ಲೋಹಿತ । ಈ ಸುರೂಪದಿ ಪಂಚನಾಡಿಸು । ಕೋಶನಳ ಪ್ರಾಣರೊಳಗಿಹ । ಪ್ರಾಣೇಶವಿಠ್ಠಲನೂ ॥ ೧ ॥ ಶ್ರೀ ಮುಧ್ವೇಶಾರ್ಪಣಮುಸ್ತು ॥

೨೪೦. ಉಗಾಭೋಗ.

ಪ್ರಥಮು ಪೂಜಿ ಆವಾಹನ ಆಸನ । ದ್ವಿತಿಯು । ಪಾದ್ಯ. ತೃತಿಯುರ್ಘ್ಯನಾಕು ಸ್ನಾನ । ತುತಿಪಾದು ಐದೆಂದು ವಸನಾರೂಪವಿತೇಳು । ಅತಿ ಸುಗಂಧಷ್ಟ ಸುಮನನವದಶಧೂಪ । ಚತುರದೀಫನ್ನೊಂದು ನೈವೆದ್ಯದ್ವಾದಶ । ತೃತಿದಶ ಆಚಮನವು ಸುಫಲಂಗಳು । ಚತುರ್ದಶ ತಾಂಬೂಲ ಹದಿನೈದು

ಹದಿನಾರು । ಮತಿವಂತರರಿವದು ಸುಪ್ರದಕ್ಷಿಣೆಯಂದೂ ॥ ಪತಿತಪಾವನ್ನ ಶ್ರೀ ಪ್ರಾಣೇಶವಿಠ್ಠಲಗೆ ಸಂ । ತತ ಷೋಡಶೋಪಚಾರ ಪೂಜೆಗಳು ಇವೆ । ವೃತಿಗಳೆಲ್ಲರು ಮೆಚ್ಚು ಪಂಚರಾತ್ರಾಗಮಾ । ನುತಿಪದು ಅತಿಗೌಪ್ಯ ಸೊಲ್ಲಿವಕೊ ॥ ೧ ॥

---

## ಶ್ರೀ ಜಗನ್ನಾಥರಾಯರ ಸ್ತೋತ್ರ ಸಂಪುಟಾಕಾರವಾಗಿ

೨೪೧. ರಾಗ–ಕೇದಾರಗೌಳ (ಅಟ್ಟತಾಳ.)

ಶ್ರೀ ಕಾಂತೊಲಿದ ದಾಸ । ರೀ ಕಲಿಯುಗದಲ್ಲಿ । ಲೇಖಾಂಶರಹುದೇ ತಂಗೀ ॥ ಶೋಕಬ್ಯಾಡೆಲೆ ನರಲೋಕ ಉಳಿದರೆಂದು । ಈ ಕಂಭದೊಳಗಿಹರೇ । ಹೇನೀರೇ ॥ ಪಲ್ಲ ॥ ಆಶೀತೂ ಮೊದಲಾದ ಹಿಮಾಶೈಲ ಪರಿಯಂತ । ಸೂಸಿಹದಿವರ ಕೀರ್ತಿ ॥ ಯೇಸು ಬಗಿಯಲಿಂದ । ನೋಸಿನೋಡಿದರನ್ನ । ಪಾಸಟಯನಿಸಸದಲ್ಲೇ । ಯೇನಲ್ಲೇ ॥ ೧ ॥ ನರಮೋಹನಾರ್ಥವಾದರು ಲೌಕೀಕೆಂಬುದೂ । ಅರಿಯಾರು ಸ್ವಪ್ನದಲ್ಲೀ ॥ ಧರಿಯೊಳಖಿಳ ನಜ್ಜ । ನರು ಪರಿಕ್ಷಿಸಿಹರು । ಬರಿದೆಸ್ತವನ ವಲ್ಲಾವೆ । ಕೇಳಲವೇ ॥ ೨ ॥ ಹರಿಕೃಪಿ ನೋಡು ಇ । ವರಿಗೆ ಜನರು ಎಷ್ಟು । ಜರಿದಾರು ಮನ್ನಿಪರೂ ॥ ಕರಣತ್ರಯದಿ ಶುದ್ಧ । ರೆರಡು ಮಾರ್ಗವ ಬಲ್ಲ । ವರು ನಿತ್ಯಾಚರಿಸಿದರೂ । ಹಿರಿಯಾರೂ ॥ ೩ ॥ ಇವರಂದ ನುಡಿಯನುಭವಕೆ ತಂದರೆ ಲೇಶ । ಭವದುಃಖವಾಗದಲ್ಲಾ ॥ ಜವದೊರವದು ಮುಕ್ತಿ । ಜವನಬಾಧಿಲ್ಲಾ ಶು । ಕವಿಕುಲತಿಲಕರಿಗೇ । ನೀಯರಗೇ ॥ ೪ ॥ ಖಳಹ ಪ್ರಾಣೇಶ ವಿ । ಠ್ಠಲನ ಚರಿತೆಪದ । ಗಳಲಿ ಬಂಣಿಸಿ ಸಂತತೀ ॥ ನಿಲಸಿ ಜ್ಞಾನಿಗಳನ್ನು । ತಲಿತೂಗಿಸಿದರುಪೇ । ಳಲು ಎನ್ನಮತಿ ಸಾಲದೂ । ಸತ್ಯವಿದೂ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

---

## ಮಂಗಳಾರ್ತಿ ಕೀರ್ತನಗಳು.

೨೪೨. ರಾಗ–ಪೂರ್ವಿ (ತ್ರಿಪುಡೆತಾಳ.)

ಮಂಗಳಂ ಜಯ ಮಂಗಳಂ । ಜಯ ಮಂಗಳಂ ಪರಮೇಷ್ಟಿಜನಕ ಉಪೇಂದ್ರಾ ॥ ಮಂಗಳಂ ಮಂಗಳಂ ॥ ಪಲ್ಲ ॥ ವೇದಉದ್ಧಾರಶ್ರೀ । ಬಾದ

ರಾಯಣ ಮಧು ॥ ಸೂದನ ಅಮರರ ಕಾಯ್ದ ದಯಾಬ್ಧೀ ॥ ೧ ॥ ನಂದ ಗೋಪಾತ್ಮಜ । ಸಿಂಧೂರ ಪಾಲಮು । ಕುಂದ ಪಾಲಿಪುದೆನ್ನ ಇಂದಿವರಾಕ್ಷಾ ॥ ೨ ॥ ತುಂಗವಿಕ್ರಮನೆ ಕಾ । ಳಿಂಗ ಮರ್ದನ ದೇವಾ ॥ ಗಂಗಜನಕ ಶ್ರೀ ವಿಹಂಗವಾಹನನೇ ॥ ೩ ॥ ಸಣ್ಣ ರೂಪದಿ ಬಲಿ । ಯನ್ನು ತುಳಿದ ಶ್ರೀ । ವ ಮನ್ನ ಕ್ಷಿತಿಪಹರವನ್ನಜನಾಭಾ ॥ ೪ ॥ ಪ್ರಾಣೇಶವಿಠಲ ಶ್ರೀ । ಮಾನಿನಿ ಪತಿ ಶತ ॥ ಮೀನಾಂಕ ಲಾವಣ್ಯ । ಭಾನುಪ್ರಕಾಶಾ ॥ ೫ ॥ ಶ್ರೀ ಮಧ್ವೇ ಶಾರ್ಪಣಮಸ್ತು ॥

೨೪೩. ಪದ, ರಾಗ–ಸಾವೇರಿ (ಏಕತಾಳ).

ಮಂಗಳಂ ಜಯ ಮಂಗಳಂ । ಶುಭ ಮಂಗಳ ಅಕ್ರೂರವರದನಿಗೇ ॥ ಮಂಗಳಂ ಜಯ ಮಂಗಳಂ ॥ ಪಲ್ಲ ॥ ಕ್ಷರ ಅಕ್ಷರ ಪುರುಷವಿನುತಗೇ । ಕ್ಷೀರಸಾಗರದಿ ನಿವಾಸನಿಗೇ । ಪಾರಶರನಸುತ ಬಾದರಾಯಣನಿಗೆ । ಮಾರನಪಿತ ಮಧುಸೂದನಗೇ ॥ ೧ ॥ ಶುಂಡಲವರದ ಮೃಡನರಸಖಗೇ । ಪಾಂಡುವಪಕ್ಷ ಕೌರುವಾಶೀಕ್ಷಾಗೇ ॥ ಲೆಂಡಚಾಣೂರ ಮುಷ್ಟಿಕರ ಸಂಹಾರಗೇ । ಅಂಡಜವಹನಿಗೆ ಸರ್ವನಾಮಗೇ ॥ ೨ ॥ ಸಚ್ಚಿದಾನಂದಪೂರ್ಣ ಕಾಮನಿಗೇ । ಮತ್ಸ್ಯವಾಮನ ನರಸಿಂಹನಿಗೇ ॥ ಹೆಚ್ಚಿನ ಹಯವೇರಿ ಮೆರವ ಬೇವಗೆ ಭಕ್ತಾ । ವತ್ಸಲ ಶ್ರೀ ಪ್ರಾಣೇಶವಿಠ್ಠಲನಿಗೇ ॥ ೩ ॥ ಶ್ರೀ ಮಧ್ವೇ ಶಾರ್ಪಣಮಸ್ತು ॥

೨೪೪. ಪದ, ರಾಗ–ಅರಬಿ (ಅಟತಾಳ).

ಮಂಗಳಂ ಮಂಗಳಂ । ಜಡಜಂಗಮವ್ಯಾಪ್ತ ನಿರ್ಲಿಪ್ತ ಸುಕಲ್ಕೀ ॥ ಮಂಗಳಂ ॥ ಪಲ್ಲ ॥ ತುಚ್ಛೇತರಜ್ಞಬಿ । ಭತ್ಸು ಪೂಜಿತ ಪಾದ । ವತ್ಸಲೇಖಪ ಭಕ್ತ । ವತ್ಸಲಹರಿತೇ ॥ ೧ ॥ ವಿದ್ಯುನ್ನಾಥನೆ ಕೋಟಿ । ವಿದ್ಯುದ್ಧ ಲೋಕೇಶ ॥ ಶುದ್ಧಸತ್ವಾಂಗ ಪ್ರಸಿದ್ಧಪುರುಷತೇ ॥ ೨ ॥ ಪ್ರಾಣೇಶಾವಿಠಲ ಕ । ಲ್ಯಾಣ ಮರುತಿದಾಸ ॥ ಮಾನಸನಿಲಯ ವಿಜ್ಞಾನದಾಯಕತೇ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೪೫. ಪದ, ರಾಗ–ಅರಬಿ (ಅಟತಾಳ).

ಮಂಗಳಂ ಮಂಗಳಂ । ದೇವಗಂಗಜನಕ ಶ್ಯಾಮಲಾಂಗಮುರಾರೇ ॥ ಪಲ್ಲ ॥ ಸಾಮಜಪಾಲ ಅ । ಸಮಾನ ಮೂರ್ತೆಸು ॥ ಸಾಮಗ ಭೂಮಿತ್ರಿ । ಧಾಮ ಶ್ರೀ ರಾಮತೇ ॥ ೧ ॥ ದಕ್ಷಿಣ ಪೂಜ್ಯ ಸಂ । ರಕ್ಷಣ ಗೋಕುಲ ಜಗ ॥ ತ್ಕುಕ್ಷೆಹೇಪಾಂಡವ । ಪಕ್ಷಾನಪೇತೇ ॥ ೨ ॥ ದೀನಮಂದಾರ ವಿ । ಹೀನ ವಿಕಾರರ ॥ ಮಾನಾಥ ಶ್ರೀ ಪ್ರಾಣೇಶವಿಠ್ಠಲತೇ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೪೬ ಪದ, ರಾಗ–ಭೈರವಿ (ಅಟತಾಳ).

ಜಯ ಮಂಗಳಂ ನಿತ್ಯ ಶುಭ ಮಂಗಳಂ ॥ ಪಲ್ಲ ॥ ಕೋಪದಿಂ ಭೂಪ ರಳಿದವಗೆ ಋಷಿವರ್ಯಗೆ । ಶ್ರೀಪಾದ ಜಲದಿ ಉದ್ಧರಿಸಿದವಗೇ ॥ ಭೂಪಲೀ ಲಿಯ ತೋರಿ ತುರಗ ಕಟ್ಟಿದವನಿಗೆ । ಶ್ರೀಪೂಜ್ಯ ನಿರ್ದೋಷ ವರ ಕಪಿಲಗೇ ॥ ೧ ॥ ಹಡದ ತಾಯಿಗೆ ತತ್ವ ಉಪದೇಶ ಮಾಡ್ದವಗೇ । ಕಡು ದಯಾವಂತ ಸಾಮಗದೇವಗೇ ॥ ಬಿಡದೆ ಸ್ತ್ರೀ ಪುರುಷರಲಿ ನಾಲ್ಕು ರೂಪದಲಿ ಹಗೆ । ನಡುಗೇಹನುತಗೊಲಿದ ಮುನಿಪುತ್ರಗೇ ॥ ೨ ॥ ಕಪಟರೂಪದಿ ರಾಯಸುತ ನಂಗ ಬೇಡ್ದವಗೆ । ಶಪಿಸಲ್ಕೆ ಶಿಲಿಯಾದ ಚರಣಧರಗೇ ॥ ಅಪರಿಮಿತ ಮಹಿಮ ಶ್ರೀ ಪ್ರಾಣೇಶವಿಠ್ಠಲನಿಗೆ । ಶಫರಾದಿ ದಶರೂಪ ತಾಳ್ದ ಹರಿಗೇ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೪೭. ಪದ, ರಾಗ–ಭೈರವಿ (ಝಂಪೆತಾಳ).

ಮಂಗಳಂ ಮಂಗಳಂ ॥ ಪಲ್ಲ ॥ ಮೂಜ್ಜಗದೊಡಿಯಗೆ ಮಾರಶತ ಲಾವಣ್ಯಸಿಗೆ । ಅರ್ಜುನಸಖ ಸಮಾಧಿಕ ಶ್ಯೂನ್ಯಗೇ ॥ ದುರ್ಜನರ ಸಂಹಾರಿ ಹತ್ತಾವತಾರನಿಗೆ । ಸಜ್ಜನಮನ ಮಂದಿರಗೆ ಸ್ವಾಮಿಗೇ ॥ ೧ ॥ ಜಾನಕೀ ರಮಣಗೇ ರಘುನಾಥ ಜಗದೇಶಗೆ । ಮೌನಿಕುಲ ಸನ್ಮಾನ್ಯ ವಿಧಿಪೂಜ್ಯಗೇ ॥

ಎನೆಂಬೆನದ್ಭುತ ಚರಿತ್ರೆ ತೋರಿಸುವನಿಗೆ । ಶ್ರೀನಿವಾಸನಿಗೆ ಪುರುಷೋತ್ತುಮನಿಗೇ ॥ ೨ ॥ ತ್ರಣ ಮೊದಲು ಮಾಂತ ಚೇಷ್ಟಪ್ರದಗೆ । ಸುಂದರಗೆ ಗುಣಪೂರ್ಣನಿಗೆ ಭೈಷ್ಮಿ ವಲ್ಲಭನಿಗೇ ॥ ಅನಿಮಿಷಾರ್ಚಿತಪಾದ । ಪ್ರಾಣೇಶವಿಠಲನಿಗೆ । ಘನವರ್ಣನಿಗೆ ಪರಾಶರ ಸುತನಿಗೇ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೪೮. ರಾಗ–ಕಾಂಬೋಧಿ (ಧ್ರುವತಾಳ.)

ಮಂಗಳ ವಿಶ್ವವ್ಯಾಪ್ತ । ವಿಶ್ವಭಿನ್ನನಿಗೇ । ಮಂಗಳ ಸರ್ವನಾಮ ಸರ್ವರೂಪನಿಗೆ ॥ ಮಂಗಳಾನಂತಾ ಅನಂತ ಮಹಿಮಗೆ । ಮಂಗಳವಾಯುವಹನಗೆ ಜಗನ್ನಾತ್ಮಿಗೆ । ಮಂಗಳವೆನ್ನೀ ಮುದದಿಂದ ॥ ಪಲ್ಲ ॥ ಕೇಶವಗೆ ಶ್ರೀದೇವಿಗೆ । ನಾರಾಯಣ ಲಕ್ಷ್ಮಿಮಿಗ । ಈಶಾಮಾಧವಗೆ ಕಮಲೆಪದಗಳಿಗೇ ॥ ದೋಷಹ ಗೋವಿಂದನಂಘ್ರಿಗೆ ಪದ್ಮದೇವಿಗೆ । ಶೇಷಶಯನ ವಿಷ್ಣುವಿಗೆ ಪದ್ಮಿಣಿ ದೇವಿಗೇ । ವಿಾಸಲಾರುತಿಯಾ ಬೆಳಗೀರೆ ॥ ೧ ॥ ಮಧುರಿಪುವಿಗೆ ಕಮಲಾಲಯ ಪದಗಳಿಗೇ । ವಿಧಿನುತ ತ್ರಿವಿಕ್ರಮಗೆ ರಮಜನನಿಗೇ ॥ ನದಿಪಿತ ವಾಮನನಂಘ್ರಿಗೆ ವೃಷಕಪಿಗೆ । ಬುಧಜನಾರ್ಚಿತ ಶ್ರೀಧರಗೆ ಧನ್ನ್ಯದೇವಿಗೆ । ಸುದತಿಯರಾರುತಿಯಾ ಬೆಳಗೀರೆ ॥ ೨ ॥ ಹೃಷಿಕೇಶನಂಘ್ರಿಗಳಿಗೆ ಮಂಗಳದೇವಿಗೆ । ಬಿಸಿಜನಾಭಬುದ್ಧಿಗೆ ದಾಮೊದರಿಂದಿರೀಗೆ ॥ ವಿಷಕಂಠಾರ್ಚಿತ ಸಂಕರುಷಣ ಹರಿಣಿಗೆ । ಅಸಮ ವಾಸುದೇವಗೆ ದಕ್ಷಿಣದೇವಿಯಂಘ್ರಿಗೇ । ಶತಿಮುಖಿಯರಾರುತಿಯಾ ಬೆಳಗಿರೆ ॥ ೩ ॥ ಅನಘಾಶ್ರೀ ಪ್ರದ್ಯುಮ್ನಗೆ ನಿತ್ಯಾಯಂ ಬಳಿಗೇ । ಅನಿರುದ್ಧಗೆ ಆನಂದದೇವಿ ಪದಗಳಿಗೆ ॥ ಮುನಿಗೇಯ ಪುರುಷೊತ್ತುಮಂಗೆ ಸದಶ್ರಯಳಿಗೇ । ಘನನಿಭಾಧೋಕ್ಷಜದೇವಾಗೆ ಶುಭದೇವಿಗೇ । ವನುತಿಯರಾರುತಿಯಾ ಬೆಳಗಿರೆ ॥ ೪ ॥ ನರಸಿಂಹಗೆ ಯಜ್ಞಳಿಗೆ । ಅಚ್ಯುತ ಸುಖದೇವಿಗೆ । ವರದ ಜನಾರ್ದನ ಸೌಗಂಧಿದೇವಿಯಳಿಗೆ । ವರ ಉಪೇಂದ್ರ ಸುಂದರಿಗೆ ಹರಿಗೆ ವಿದ್ಯದೇವಿಗೆ । ಕರುಣಿ ಕೃಷ್ಣ ಪ್ರಾಣೇಶವಿಠ್ಠಲ ಸುಶೀಲಿಗೇ । ತರುಣಿಯರಾರುತಿಯಾ ಬೆಳಗೀರೆ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೪೯. ರಾಗ–ರೇಗುಪ್ತಿ (ಏಕತಾಳ.)

ಶ್ರೀ ನಾರಸಿಂಹಾ, ಕಾಯೊ । ದಾನವಾನೀಕಾಧ್ವಾಂತಾ । ಭಾನು ಕಾಮಿತ ಸುರಧೇನು ॥ ಶ್ರೀ ನಾರಸಿಂಹಾ ॥ ಪಲ್ಲ ॥ ಘೋರ ದುರಿತಾ ಪರಿಹಾರ ಮಾಳ್ಪರ ಕಾಣೆ ॥ ವೀರಾ ನಿನ್ಹೊಳೀದು ಇನ್ನಾರಾ ॥ ಶ್ರೀ ॥ ೧ ॥ ಭೀಷಾಣ ಉಗ್ರವಿಶ್ವವಾಸಾ ಭದ್ರಾನೆ ಸ್ವಪ್ರ ॥ ಕಾಶಾಮೃತ್ಯುರ್ಮೃತ್ಯು ನಿರ್ದೋಷಾ ॥ ೨ ॥ ಪ್ರಬಲಾನೀ ತುಚ್ಛಮಾದಿ ಅಬಲಾರ ಕೈಬಿಡಲು ॥ ಸುಬಲಾರ್ಮೆಚ್ಚೋರೆ ಶಾಮು ಶಬಲಾ ॥ ೩ ॥ ಜ್ಞಾನಶೂನ್ಯ ನಾ ನಿನ್ನ ಧ್ಯಾನವ ಮರೆತರೆ ॥ ನೀನು ಹಾಗೆ ಮರಿಯಬೇಕೇನೂ ॥ ೪ ॥ ಎಲ್ಲಾರಿಗೊಡಿಯಾ ಲಕ್ಷ್ಮಿನಲ್ಲಾ ಪ್ರಾಣೇಶವಿಠಲಾ ॥ ಬಲ್ಲೀದಭಯವಾ ಕಳಿಯ ಬಲ್ಲೀ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೫೦. ಉಗಾಭೋಗ, (ಮಧ್ವನಾಮದ ಧಾಟಿ)

ದ್ವಯಪರ್ವನಾಮಿಕ । ಕನಿಷ್ಠಾದಿ ಕ್ರಮತರ್ಜ । ನಿಯ ಮೂಲತನಕ ಗಾಯಿತ್ರಿ ಮಂತ್ರಾ ॥ ನಯದಿಂದ ಶಕ್ತ್ಯಾನುಸಾರ ಜಪಿಸಲು ರಮಾ । ಲಯಸು ಪ್ರಾಣೇಶವಿಠಲನ ಕಾಂಬರೂ ॥ ೧ ॥

**अनामिकद्वयपर्व । कनिष्ठादिक्रमेणतु ॥ तर्जनीमूलपर्यंतं गायत्रीजपमाचरेत् ॥**

೨೫೧. ರಾಗ–ಸೌರಾಷ್ಟ್ರ (ಅಟತಾಳ)

ಮಂಗಳಂ ಮಂಗಳಂ । ಜಯ ಮಂಗಳ ಶ್ರೀ ಸುಧೀಂದ್ರಾಬ್ಧೀಜ ಚಂದ್ರಾ ॥ ಪಲ್ಲ ॥ ನಾಭಿಜ ನಾಭಿಜ ನಾಭಿಜ ಪದ ॥ ಜಿತ ಕಂಜ ॥ ಶೋಭಿತ ಕೇಳಿ ಬಿಡದೆಮ್ಮನಾಳೀ ॥ ೧ ॥ ಕೋಲಜ ಕೂಲಸುಸ್ಥೀಲ, ಮಂತ್ರಾಮಂದಿರಾಲಯ । ವಾಲಯ ಪಾಲಯಮಾಂಗುರು ॥ ೨ ॥ ಏನೇನು ಮಾಡಲು ನೀನೊಲಿಯುದಲೆಂದು ॥ ಪ್ರಾಣೇಶವಿಠಲನ ಕಾಣರೋ ಜನರೂ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨೫೨. ಪದ, ರಾಗ–ಸೌರಾಷ್ಟ್ರ (ಅಟತಾಳ).

ಮಂಗಳಂ ಮಂಗಳಂ ಜಯ ಮಂಗಳ ಭುವನೇಂದ್ರಪೂಜ್ಯ ಪದಾಬ್ಜಾ ॥ ಪಲ್ಲ ॥ ಪಿಂಗಳಭಂಗ ಸುಸಂಗನ್ಯ್ಯೆವಾದಿ ॥ ಭುಜಂಗ ವಿಹಂಗ ಉತ್ತುಂಗ ನಿಸ್ಸಂಗಾ ॥ ೧ ॥ ವಾತವಿಖ್ಯಾತ ವಿಧಾತಾಂಶ ಸದ್ಗುಣ ॥ ವ್ರಾತಳೇಂದ್ರಕರ ಜಾತಸುನಾಥಾ ॥ ೨ ॥ ಪ್ರಾಣೇಶವಿಠಲನ ಪ್ರಾಣಪ್ರವೀಣ ॥ ಸು । ಪ್ರಾಣ ಮತಾಬ್ಧಿ ಪಾರೀಣ ಕಲ್ಲ್ಯಾಣ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

ಸದ್ಯಃಕ್ಕೆ ಉಪಲಬ್ಧವಾಗಿರುವ,
ಶ್ರೀ ಪ್ರಾಣೇಶ ವಿಠಲರ ಕೀರ್ತನಗಳು ಸಂಪೂರ್ಣವಾದದು.

**॥ ಶ್ರೀ ಗುರು ಮಧ್ವೇಶ ಶ್ರೀ ಕೃಷ್ಣಾರ್ಪಣಮಸ್ತು ॥**



## हरिः ॐ

प्राणपतिपदद्वद्वं । पंकजासक्तमानस ॥
शमादिगुणसंयुक्तं श्रीप्राणेशगुरुं भजे ॥ १ ॥
गुरुभक्तिमतां श्रेष्ठां गुरु पादावलंबनं ॥
गुरुपदिष्ठ मार्गस्थं गुरुप्राणेश गुरुंभजे ॥ २ ॥

ಶ್ರೀಪ್ರಾಣೇಶ ದಾಸಾರ್ಯರ ಸಾಕ್ಷಾತ ಪುತ್ರರೂ
ಶಿಷ್ಯರೂ ಅಪರೋಕ್ಷಜ್ಞಾನಿಗಳೂ ಮಹಾತ್ಮರೂ ಆದ

# ಶ್ರೀಗುರುಪ್ರಾಣೇಶ ವಿಠಲರ ಕೀರ್ತನಗಳು.



### ಶ್ರೀ ದೇವರ ಸ್ತೋತ್ರ.

೧. ಪದ, ರಾಗ-ಕೇದಾರಗೌಳ (ಆದಿತಾಳ).

ಪಾಹಿ ಪಂಧರಿ ರಾಯಾ । ಪ್ರಾಂ । ಪಾಹಿ ಪಾಂಡವ ಪ್ರಿಯಾ ॥ ಪಲ್ಲ ॥ ಹಿಂದೆ ನಾನು ನಿನ್ನ । ದರುಶನ । ಕಂಡು ಬಂದು ಘನ್ನಾ ॥ ನಂದದಿ ನಿಂದ ಪನಾ । ರಕ್ಕಿಸಿ । ಮುಂದೆ ನಲಿದೆ ಚನ್ನಾ ಪಾಂಪಾಹಿ ॥ ೧ ॥ ಅಷ್ಟೆ ಮಾತ್ರ ಸಾಕು, । ದುರಿತಗ । ಳಟ್ಟಿ ಕಾಯಬೇಕೂ ॥ ಮುಟ್ಟು ಮಾಡಬೇಕೂ । ವಿಷ

ಯುಗ । ಆಟ್ಟಿ ಹಾಕಿ ನೂಕು, ಮಾಂಪಾಹಿ ॥ ೨ ॥ ಮರುತ ಮತದೊಳಿಟ್ಟು । ನಿನ್ನನು । ಸ್ಮರಿಪ ಭಾಗ್ಗ್ಯ ಕೊಟ್ಟೊ ॥ ಗುರು ಪ್ರಾಣೇಶವಿಠಲಾ । ನಿನ್ನವನೆಂದು । ಕರಪಿಡಿದು ಕರಿಯೋ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨. ಪದ, ರಾಗ–ಜಾಂಗಲಿ (ರೂಪಕತಾಳ).

ಪೊರಿಯು ಬೆಕೆಲಾ । ಮರಿ ನೀನು ಥಲಾ ॥ ಪಲ್ಲ ॥ ಯೇಸು ಜನ್ಮದಿ ನಿನ್ನ ದಾಸನೆನಿಸಿದೆ । ಉ । ದಾಸ ಮಾಡದೆ ಮಹಿ ದಾಸ ಎನ್ನನು ನೀ ॥ ೧ ॥ ನಿನ್ನನೆ ಮರೆವುದು ಯನ್ನ ಸ್ವಧರ್ಮವು ॥ ನಿನ್ನ ಘನ್ನತಿಗಿದು । ಸನ್ನುಮತವೆ ಹರಿ ॥ ೨ ॥ ಸರುವಜ್ಞ ನೀನೆಂದೂ । ವರದವು ಶೃತಿಗಳೂ ॥ ಮರೆವದುಚಿತವೇನೊ ಗುರು ಪ್ರಾಣೇಶವಿಠ್ಠಲ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೩. ಪದ, (ಅಟತಾಳ).

ದಯಾನಿಧೆ ದಯ ಮಾಡಬೇಕೂ । ದಯಮಾಡಬೇಕು ಎನ್ನಯ ದೋಷಾವೆಣಿಸದೆ । ಹಯಮುಖಲೋಕಾತ್ರಯ ವ್ಯಾಪ್ತ ಪರಮಾಪ್ತ ॥ ಪಲ್ಲ ॥ ನಿನ್ನ ನಂಬಿದಾ ಭಕತರನ್ನ ಚನ್ನಾಗಿ ಕಾಯ್ದಾ ॥ ಘನ್ನಾಕೀರುತಿ ಕೇಳಿ ಮನ್ನಾದಿನಮಿಸುವೆ । ಬನ್ನಬಡಿಸದೆ ಸಂಪನ್ನ ಗುಣಾರ್ಣವ ॥ ೧ ॥ ಮಾನಿ ಮಾನದನೇ ದ್ರೌಪದಿ ಅಭಿಮಾನ ರಕ್ಷಕನೇ ॥ ಭಾನುಜನಕ ಮುಖ್ಯಪ್ರಾಣ ವಂದಿತಾಂಘ್ರಿ । ನೀನೊಲಿಯದಿರೆ । ಸುಜ್ಞಾನಮಾರ್ಗವ ಕಾಣೆ ॥ ೨ ॥ ಹರಿಕೋಟತೇಜಾ ಕಾಮಿತಕಲ್ಪತರು ಮಹರಾಜಾ ॥ ಸುರನದಿ ಜನಕ ಅಸುರಶಿಕ್ಷ ಕಮಲಾಕ್ಷ । ಕರುಣಿ ಕಪಿಲವ್ಯಾಸಾ । ಗುರು ಪ್ರಾಣೇಶವಿಠಲಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೪. ಪದ, ರಾಗ–ಶಂಕರಾಭರಣ (ಅಟತಾಳ).

ಸುಖದಸುಂದರ ವಿಠ್ಠಲರಾಯಾ । ಈ । ಭಕುತಗೆ ವಿಜ್ಞಾನ ಕೊಡು ಜೀಯಾ ॥ ಪಲ್ಲ ॥ ಸುಖತೀರ್ಥ ಶಾಸ್ತ್ರಸಮ್ಮತವಾಗಿ । ಈ । ಸುಕವನಕ್ಕೆ ವಾಕ್ಯವದಗಾಲಿ ॥ ಸಕಲ ಜನರು ಕೇಳಿ ಪಾಡಲೀ । ಇದು । ಮುಕುತಿಗೆ ಸತ್ಪಥವಾಗಲೀ ॥ ೧ ॥ ಆಯುರಾರೋಗ್ಗ್ಯವು ಪೆಚ್ಚಲಿ । ಕೇಳಿ ಮಾಯಾವಾದಿ

ಗಳು ಬಾಯ್ಮುಚ್ಚಲೀ ॥ ಶ್ರೇಯಸ್ಸು ಬಂದು ಕೈಗೂಡಲೀ । ಶ್ರೀ ವಾಯುದೇವನು ಪ್ರೀತನಾಗಲೀ ॥ ೨ ॥ ಗುರು ಪ್ರಾಣೇಶಾವಿಠ್ಠಲ ನೀನೂ । ತ್ವರ ಕರ ಪಿಡಿ ಶರಣರ ಸುರಧೇನೂ ॥ ಮರತವನಲ್ಲವೊ ನಿನ್ನನು । ಈ । ಬಿರಿದು ನಿನ್ನದು ಕರ ಮುಗುವೇನೂ ॥ ೩ ॥

೫. ಪದ, ರಾಗ–ಕಾಂಬೋಧಿ (ಝಂಪೆತಾಳ).

ತಂದೆ ಪ್ರಾಣೇಶವಿಠ್ಠಲರಾಯುವಲಿದು ಆ । ನಂದ ಕೊಡು ಈ ಭಕ್ತಗೇ ॥ ಪೊಂದಿ ಕೊಂಡಿಹ ನಿನ್ನ । ನೆಂದು ನಾ ಪ್ರಾರ್ಥಿಸುವೆ । ಮಂದರರೋದ್ಧರ ಮುಕುಂದಾ । ನಂದಾ ॥ ಪಲ್ಲ ॥ ಅನವರತ ನಿನ್ನ ಧೇನಿಸುವಂತೆ ಮನವು ಬಹು ಅನುಕೂಲವಾಗಿ ಇರಲೀ । ಅನಘ ನಿನ್ನಂಘ್ರಿಗಳ ಪೂಜಿಸುವದಕೆ ಕರಗ । ಳನುಕೂಲವಾಗಿ ಇರಲೀ ॥ ಅನಿಮಿಷಾರಾಧ್ಯ ನಿನ್ನ ಕೀರ್ತಿ ಪದಕೇ ಜಿಂಹೆ । ಅನುಕೂಲವಾಗಿ ಇರಲೀ । ದನುಜ ಕುಲವೈರಿ ನಿನ್ನ ವರಡಿಗೆ ನಡಿಯೆ ಪದ । ವನುಕೂಲವಾಗಿ ಇರಲೀ । ಬರಲೀ ॥ ೧ ॥ ಇವನ ಕವನಾ ಕೇಳಿ ಹರುಷಯುತರಾಗಿ ಸ । ತ್ಕವಿಗಳೂ ತಲಿದೂಗಲೀ । ಪವನ ಮತ್ತದಲಿ ಪೇಳಿದಂತೆ ಅದನನುಸರಿಸಿ । ಕವಿತಯೂ ಬಂದೊದಗಲೀ ॥ ನವರಾಗಗಳಿಂದೊಪ್ಪಿಲಘುದೀರ್ಘ ಮೊದಲು ಮ । ರ್ಮವ ತಿಳಿದು ಪೇಳುತಿರಲೀ ॥ ಭುವನದೊಳಗುಳ್ಳ ಸಜ್ಜನರು ಶೋಧಿಸಿ ಆಶು । ಕವಿ ಎಂದು ಕರವುತಿರಲೀ । ಮೆರೆಯಲೀ ॥ ೨ ॥ ಚಿರಕಾಲ ಬಾಳಿ ಬಹು ಕೀರ್ತಿಯುತನಾಗಿ । ಈ ಧರಿಯೊಳಗೆ ಸುಖಿಸುತಿರಲೀ । ಪರಮ ಭಕುತಿಯು ಪೆಚ್ಚಿ ಸ್ವೋತ್ತುಮರ ಪದಗಳಿಗೆ । ಎರಗಿ ಕರುಣವ ಪಡೆಯಲೀ ॥ ಮರಿಯದಲೆ ಇಹಪರದಿ ಸುಖಗಳನು ಕೊಟ್ಟು ಶ್ರೀ । ಹರಿಯೆ ಪೊರೆಯುಂದಾಪಲೀ । ಮರುತಾಂತರ್ಯಾಮಿ ಗುರು ಪ್ರಾಣೇಶವಿಠ್ಠಲನೆ । ಶರಣಜನ ಕಾಮಧೇನೂ । ನೀನೂ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೬. ಪದ, (ಅಟತಾಳ).

ಶ್ರೀಹರಿ ಸ್ಮರಣಿಯು ಮಾಡೋ ಪ್ರಾಣಿ ॥ ಶ್ರೀಹರಿ ॥ ಸ್ಮರಣಿಯು ಮಾಡೊ ಪ್ರಾಣಿ । ಕುಹಕರ ಸಂಗಕೆ ಬ್ಯಾಡೋ ಪ್ರಾಣಿ ॥ ಪಲ್ಲ ॥ ಉರಿಹಸ್ತ

ವರ ಕೊಟ್ಟು ಹರನು ಬಳಲಿದನಾಗ ‖ ತ್ವರದಿಂದವನ ಪೊರೆದ ಸುರನ ಸಂಹರಿಸೀದ । ಶ್ರೀಹರಿ ‖ ೧ ‖ ದಿತಿಜರ ಬಾಧಿಗೆ । ಶತಮುಖ ಪ್ರಾರ್ಥಿಸಲ ಮೃತವ ಕರದು । ಅಹಿತರನ್ನು ವಂಚೀಸಿದ ‖ ೨ ‖ ತರುಳ ಪ್ರಲ್ಹಾದ । ಕರ್ಬುರ ದೈತ್ಯನ ಬಾಧಿಗೆ ‖ ಹರಿಯೆಂದೊದರಲವನ ಪೊರದು ದೈತ್ಯನ ತರಿದ ‖ ೩ ‖ ಶಿಷ್ಟೇಷ್ಟಪ್ರದ ಪರಮೇಷ್ಟಿಜನಕನಲ್ಲಿ । ಅಷ್ಟ ಕರ್ತೃತ್ವವಿರಲು ‖ ಇಷ್ವಾಕ್ಯ ಬಳಲುವಿ ‖ ೪ ‖ ಗುರು ಮಧ್ವಾಂತರ್ಗತ । ಗುರು ಪ್ರಾಣೇಶ ವಿಠಲಾ ‖ ಸುರಮುಖ್ಯರಳಿದು । ತನ್ನ ಶರಣಜನರ ಪೊರೆದಾ ‖ ೫ ‖ ಶ್ರೀಮಧ್ವೇಶಾರ್ಪಣಮಸ್ತು ‖

## ಸುಪ್ರಿಪದ.

೭ ಪದ, ರಾಗ–ಕಾಂಬೋಧಿ (ಝುಂಪೆತಾಳ).

ಪಂಚಶರ ಪಿತನೆ ಅಹಿಮಂಚದಲಿ ಮಲಗಿಹನೆ । ಪಂಚಾನನಾದಿ ಸುರ ವಂದ್ಯಾ ‖ ಸುರವಂದ್ಯ ದುರಿತಾರಿ ಪಂಚಾಶ್ಯವದನಾ ಸಲಹೆಮ್ಮಾ ‖ ೧ ‖ ಅಂಬುಜಾಸನ ವಾಯು । ಶಂಭುಸುರಮುಖ ಪೂಜ್ಯ । ಅಂಬುಜಾನಾಭಾ ಅಕರ್ಾಭಾ ‖ ಅಕರ್ಾಭಯನ್ನ ಕುಟುಂಬ ಸಲಹುವದೋ ನರಸಿಂಹಾ ‖ ೨ ‖ ಘೋರ ದುರಿತಗಳ ಪರಿಹಾರ ಮಾಳ್ಪರ ಕಾಣೆ ನಾರಸಿಂಹನೆ ನಿನ್ನೈತಿರಿಕ್ತಾ ‖ ವ್ಯತಿರಿಕ್ತ, ಕಾರುಣ್ಯಸಿಂಧು ಸಂಸಾರಾಬ್ಧಿಯಿಂದಾ ಕಡೆಗೆತ್ತೂ ‖ ೩ ‖ ಕಲಿ ಕಲುಷದಿಂ ಮನಸು ಮಲಿನವಾಗಿದೆ ದೇವ । ಉಳಿವ ಬಗಿ ಕಾಣೇ ಕಲಕಾಲ ‖ ಕಲಕಾಲ ಕರುಣದಲಿ ಸಲಹುವದು ನೀನೇವೆ ಬಲ್ಲೀ ‖ ೪ ‖ ನೀನೊಲಿದು ಕೊಟ್ಟದ್ದು ಏನಾದರೂ ಇರಲಿ । ನಾನುರಾಗದಲಿ ಸವಿವಂಧಾ । ಸವಿವಂಧ ಮತಿ ಇತ್ತು ಗುರು ಪ್ರಾಣೇಶವಿಠಲಾ ಪೊರಿಯಮ್ಮಾ ‖ ೫ ‖

## ಶ್ರೀ ಲಕ್ಷ್ಮೀದೇವಿ ಸ್ತೋತ್ರ.

೮ ಪದ, ರಾಗ–ಪೂರ್ವಿ (ಆದಿತಾಳ).

ದಯಮಾಡೆ ದಯಮಾಡೆ ‖ ಹಯಮುಖನಿಗೆ ಅತಿ ಪ್ರಿಯ ಕಮಲಾಲಯೆ ‖ ಪಲ್ಲ ‖ ಹೊಲಬುಗಾಣೆ ಭವಜಲಧಿಯೊಳಗೆ ತ್ವರ ‖ ಸಲಹು ನಿನ್ನ ಕರಜಲಜದಿ ಪಿಡಿದು ‖ ೧ ‖ ನಳಿನ ಭವಾದ್ಯರ ಸಲಹುವಿ ಈಪ್ಸಿತ ‖

ಫಲವಿತ್ತು ಕರುಣದಲೀ ಮಹಲಕುವಿಷಾ ॥ ೨ ॥ ಕ್ಷೋಣಿ ಭಣಗು ನಾನೋ ರ್ವನು ನಿನ್ನಯ । ಧ್ಯಾನವೆ ಪಾಲಿಸು ಮಾಣದೆ ಜವದಿಂ ॥ ೩ ॥ ಶರಣು ಪೊಕ್ಕವರ ಜರಿದರೆ ನಿನ್ನಯ ॥ ಬಿರಿದಿಗೆ ಬಾಹದೆ ಕೊರತಿಯು ಜಾನಕಿ ॥ ೪ ॥ ಜ್ಞಾನಗಮ್ಯ ಗುರು ಪ್ರಾಣೇಶವಿಠಲನ ॥ ಮಾನಿನಿಯನ್ನಯ ಹೀನತ ಎಣಿಸದೆ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೯. ಪದ, ರಾಗ-ಸುರಟಿ (ಅಟತಾಳ).

ಮಂಗಳಂ ಮಂಗಳಂ । ಜಯ । ಮಂಗಳ ಶ್ರೀ ಶ್ರೀನಿವಾಸನರ್ಧಾಂಗೀ ॥ ಪಲ್ಲ ॥ ಭೃಗುಕಾಲಿಲೊದಿಯಾಲು । ಅಗಲಿ ಬಂದಳು ಎಂಬೊ ॥ ಬಗ ತೋರಿ ಮೋಹಿಸಿ ಇಗಡ ಜನರನಾ ॥ ಮಂಗಳಂ ॥ ೧ ॥ ಪರನು ಧಾರ್ಮಿ ಕನಾದ । ವರನಾರಾಯಣ ಋಷಿ ॥ ಗೊರವಿತ್ತು ನಡೆತಂದೆ ಮೆರವ ಸನ್ನ ತಿಗೆ ॥ ೨ ॥ ಕೋಲಾಸುರನ ಕೊಂದು ಪಾಲಿಸಿ ಪುರವನ್ನು ॥ ಶೀಲೆ ಚಂದ್ರಾ ದೇವಿ ಆಳಿದ ಗೊಲಿದೇ ॥ ೩ ॥ ಆತ ತಕ್ಷಣದಲ್ಲಿ ಶ್ವೇತುರಾಯನ ಕೊಂದು ॥ ಮಾತು ಲಾಲಿಸಿ ಅವನ ಪಾತಕ ಕಳದೇ ॥ ೪ ॥ ಗುರು ಪ್ರಾಣೇಶಾವಿಠಲಾ ಇರುವ ನೀನಿದ್ದಲ್ಲೀ ॥ ಎರವಿಲ್ಲೀ ಮಾತಿಗೆ ಸುರರ ಸಮ್ಮತವೂ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಶ್ರೀ ವಾಯು ದೇವರ ಸ್ತುತಿ.

೧೦. ಪದ, ರಾಗ-ಕಾಂಬೋಧಿ (ಆದಿತಾಳ).

ಶ್ರೀ ಮದಾನಂದ ತೀರ್ಥರೆಂಬ । ಅರ್ಥಿಯ ಪೆಸರುಳ್ಳ । ಗುರುಮಧ್ವ ಮುನಿರಾಯಾ । ಎನಂಬೆ ನಾನಿನ್ನ ಕರುಣಕೆ ಎಣೆಗಾಣೆ ॥ ಪಲ್ಲ ॥ ಬ್ಯಾಸ ರದೆ ಸರ್ವರಲ್ಲಿ । ಶ್ವಾಸಜಪಗಳ ಮಾಡಿಗುಂ ॥ ಶ್ರೀಶಗರ್ಪಿಸುತ ಹರಿ । ದಾಸ ರನ್ನು ಪಾಲಿಸಿದೆ ॥ ೧ ॥ ಅಂದು ಹನುಮಂತನಾಗಿ । ಬಂದು ಸುಗ್ರೀವಗೆ ಗುರುಂ ॥ ಅಂದವಾದ ಪದವಿತ್ತಾ । ನಂದವನು ಬಡಿಸಿದೇ ಗುರುಂ ॥ ೨ ॥ ಕುಂತಿಯ ಕುಮಾರನಾಗಿ । ಹಂತ ಕೌರುವರನ ಕೊಂದಿ ಗುರುಂ ॥ ಅಂತು ಪುಣ್ಯವ ಶ್ರೀ । ಕಂತುಪಿತಗರ್ಪಿಸಿದಿಯೊ ॥ ೩ ॥ ಅದ್ವೈತರನ್ನು ಕಾದಿ ।

ಗೆದ್ದು ನಿನ್ನ ಭಕ್ತರಿಗೆ ಗುರು ಮಧ್ವಮುನಿರಾಯಾ ॥ ಶುದ್ಧ ತಾತ್ಪರ್ಯ ವಾಕ್ಯ । ಪದ್ಧತಿಯ ತಿಳಿಸಿದಿ ಗುರುಂ ॥ ೪ ॥ ಗುರು ಪ್ರಾಣೇಶಾವಿಠಲ । ವರನೆಂದು ಡಂಗುರವ ಗುರುಂ ॥ ಸಾರಿಸಿ ಸಜ್ಜನರನ್ನು । ಹರಿಲೋಕ ಸೇರಿಸಿದೀ ಗುರುಂ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೧. ಪದ, (ಏಕತಾಳ).

ಪವನಾ ಸಂಭೂತಾವಲಿದೂ, ತವಕಾದಿ ಕಾಯಾಬೇಕೂ । ಇವನಾರೋ ಎಂದೂದಾಸಿನಾ । ಮಾಡದಲೆಯನ್ನಾ ॥ ಪಲ್ಲ ॥ ಹರಿವೇಷಧರನೇ ನರ । ಹರಿ ಭಕುತರ ಪೊರಿಯುವದಕ್ಕೇ ॥ ಹರಿಯಂತೆ ಪದಗುವಿಯೋ । ನೀನೂ । ಹರಿದಾಸ ನಾನೂ ॥ ೧ ॥ ಕಪಿವಾಕಪಿಯಾಜ್ಞದಂತೇ । ಕಪಿಲನ್ನ ಪತ್ನಿಯನ್ನೂ ॥ ಕಪಿಗಳು ಹುಡುಕಿ ಮಿಡುಕಲು । ಕಾಯ್ದೇ ಆಗಾಲೂ ॥ ೨ ॥ ಅಜಸುತನ ಶಾಪದಿಂದ । ಅಜಗರನಾದ ವನಪಾದ ॥ ರಜದೀ ಪೂನಿತನ ಮಾಡಿದನೇ । ಅಜ ಪದವಿಗೆ ಬಹನೇ ॥ ೩ ॥ ಕಲಿಯುಗದಿ ಕವಿಗಳೆಲ್ಲಾ । ಕಲಿಯಾ ಬಾಧೆಗೆ ಬಳಲೀ ॥ ಕಲಿವೈರಿ ಮುನಿ ಎಂದೆನಿಸಿದೇ । ಕಲಿಮಲವಾ ಕಳದೇ ॥ ೪ ॥ ಗುರು ಪ್ರಾಣೇಶಾವಿಠಲಾ । ಗುರುವರನೆಂಬೊ ಜ್ಞಾನಾ ॥ ಗುರು ಮಧ್ವರಾಯಾ ಕರುಣಿಸೋ । ಗುರು ಮತಿಯನು ಬಿಡಿಸೋ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಸರಸ್ವತಿದೇವಿ ಸ್ತುತಿ.

೧೨. ಪದ.

ವಾಣೀ ಬ್ರಹ್ಮನ ರಾಣಿ ಜಾಣೆ ಸು । ಶುಕವಾಣೀ ॥ ಪಲ್ಲ ॥ ಪ್ರೀಯಳೆ ಹರಿಯಾ । ನವ ವಿಧದಿ ಭಜಿಸುವಾ ॥ ಕವಿಗಳೊಳಿಡಬೇಕೂ । ನಿನ್ನನೆ ವಂದರಿಯಬೇಕೂ ॥ ೧ ॥ ವೀಣಾ ಪಾಣಿಯೆ ಪಿತನಾ । ಧ್ಯಾನಾದೊಳಿರಿಸೆನ್ನ ॥ ಹೀನಾ ವೈಷಿಕಗಳನ । ನಾಸೊಲ್ಲೆನನುಗಾಲಾ ॥ ೨ ॥ ಗುರು ಪ್ರಾಣೇಶಾವಿಠ್ಠಲಾ । ತ್ವರಿತಾ ತಾನೂಲಿವಂತೆ ॥ ವರಮತಿಯ ನಿತ್ತೆಮ್ಮ । ಪೊರಿಯಲಿ ಬೇಕಮ್ಮ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ರುದ್ರ ದೇವರ ಸ್ತುತಿ.

೧೩. ಪದ, (ಏಕತಾಳ).

ಮಹದೇವ, ಮಹದೇವ । ಕಾಯೋ ಮಹದೇವ ಯನ್ನ ನೀ ನೋಯು ಗೊಡದೆ ತ್ವರ । ಪಾವನ ಮಾಡೀ ॥ ಪಲ್ಲ ॥ ಅಸಮರಕ್ಕಸಗೆ ವಶವಾಗೆ ವನನು ॥ ಬಿಸಿಜಾಕ್ಷಗೆ ವಪ್ಪಿಸಿ ಕೊಲಿಸಿದನೇ ॥ ೧ ॥ ನಂಜುಂಡರಗಿಸಿ । ದಂ ಜನೆ ಕುವರ ಪ್ರ ॥ ಭಂಜನಸುತನಾನಂಜುವೆನೀಗಾ ॥ ೨ ॥ ಸೂಸುವ ಭವಶರ ಧೀಸದೆ ಗುರು ಪ್ರಾ । ಣೇಶವಿಠ್ಠಲನ ದಾಸ ಮಣಿಗುವೆ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಶ್ರೀ ರಾಘುವೇಂದ್ರ ಸ್ವಾಮಿಗಳವರ ಸ್ತೋತ್ರ.

೧೪. ಪದ, ರಾಗ–ಕೇದಾರಗೌಳ (ಅಟತಾಳ).

ತಂಗೀ ನೀ ಕೇಳಿದ್ಯಾ ರಾಘವೇಂದ್ರಾ । ಘಂಗಳ ಕಳದು ಸುಖಂಗಳ ಕೊಡುವದು । ತಂಗಿ ನೀ ಕೇಳಿದ್ಯಾ ॥ ಪಲ್ಲ ॥ ಶ್ರೀ ಪೂರ್ಣ ಬೋಧರ ಮತಾಪಯೊಬ್ಧಿಗೆ ಚಂದ್ರ ॥ ತಾಪಸೋತ್ತುಮರ ದಿವ್ಯಾಪಾರ ಮಹಿಮೆಯು ॥ ೧ ॥ ಅಂಗಹೀನರಿಗೆ ದಿವ್ಯಾಂಗ ಕೊಟ್ಟರೆಂದು ॥ ಸಂಗೀತಮುಖದಿ ಜನಂಗಳು ಪಾಡುವದು ॥ ೨ ॥ ಕಿವಿ ಇಲ್ಲದವರಿಗೆ ತವಕಾದಿ ಕೊಟ್ಟರೆಂದು ॥ ಸುವಿವೇಕ ಮನದಿಂದ । ಕವಿಜನ ಪಾಡುವದು ॥ ೩ ॥ ವಂಧ್ಯಾಸ್ತ್ರೀಯರು ಬಂದು ನಿಂದು ಆರಾಧಿಸೆ ॥ ಸಂದೇಹವಿಲ್ಲ ಬಹು ಮಂದಿ ಮಕ್ಕಳ ಕೊಟ್ಟ ॥ ೪ ॥ ಗುರು ಪ್ರಾಣೇಶಾವಿಠಲ ಸರುವ ಕಾಮಿತಾರ್ಥವ ॥ ಗುರು ರಾಘ ವೇಂದ್ರರಲ್ಲಿ ನಿರುತದಿ ಕೊಡಿಸುವ ॥ ೫ ॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥

೧೫. ಪದ, ರಾಗ--ಧನಾಶ್ರಿ (ಅಟತಾಳ).

ತಪ್ಪುಗಳೆಣಿಸಾದೆನ್ನಪ್ಪ ಕಾಯಲಿಬೇಕು । ಸರ್ಪಶಯನನ ದೂತಾ ॥ ಇಪ್ಪತ್ತುವಂದು ಕುಭಾಷ್ಯ ಮುರಿದ । ರಾಮ । ತಪ್ರವರ್ತಕ ರಾಘವೇಂದ್ರ ಮುನಿಪ ಮಹಾ ॥ ಪಲ್ಲ ॥ ಪ್ರತಿ ವರುಷಕೆ ಬಂದು ನುತಿಸಿ ಪೋಗು ಎಂದು । ನತ ಸ್ವಪ್ನದಲಿ ನೀ ಬಂದೂ ॥ ಹಿತದಿಂದ ಪೇಳಲು ರತನಾಗಿ ಧನದಿ ಮ । ರತು ಬಿಟ್ಟೆ ನಿಮ್ಮನು ಯತಿಕುಲೋತ್ತುಮ ಇಂಥಾ ॥ ೧ ॥ ಸ್ನಾನಸಂಧ್ಯಾನ ಸುಜ

ಪತಪ ವ್ರತಹೋಮ । ಮೌನಮಾರ್ಗಗಳರಿಯೇ ॥ ಜ್ಞಾನಿಗಳಾನು ಸಂಧಾನಪೂರ್ವಕಪೂಜೆ । ಯಾನು ಮಾಡದೆ ದುಷ್ಟಮಾನವರೊಳಗಿದ್ದೆ ॥ ೨ ॥ ಏನು ಜನ್ಮದಿ ಬಂದಾ ದೋಷವ ಕಳದು ವಿ । ಶೇಷ ಸುಖವ ಕೊಡುವಾ ॥ ಈ ಸುವಾರ್ತೆಯ ಕೇಳಿ ಮೊರೆಹೊಕ್ಕೆ ಗುರು ಪ್ರಾ । ಣೇಶ ವಿಠಲನ ದೂತಾ । ಮತ್ಪ್ರೀತಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಶ್ರೀ ಸತ್ಯ ಪರಾಯಣ ಸ್ವಾಮಿಗಳ ಸ್ತುತಿ.

೧೬ ಪದ, ರಾಗ–ಕಲ್ಯಾಣಿ (ರೂಪಕತಾಳ).

ಕಂಗಳು ಪಣಿಯು ನೋಡೆಲ ಮನವೆ । ಮಂಗಳಾಂಗ ಸತ್ಯಪರಾಯಣ ಗುರುಗಳ ॥ ಪಲ್ಲ ॥ ಹಿಂದಿನ ಜನುಮದಿಂದ । ಬಂದ ಪಾಪಂಗಳ ॥ ಇಂದು ತಮ್ಮ ಪರುಶನ । ದಿಂದ ಕಳದಾ ॥ ಕಂ ॥ ೧ ॥ ನಂದತೀರ್ಥ ಶಾಸ್ತ್ರ । ಸಿಂಧು ವಿಗೆ ಪೂರ್ಣ ಚಂದ್ರಾ । ನಂದದಲೊಪ್ಪುವ ಗುಣ । ಸಾಂದ್ರರ ಪದಂಗಳ ॥ ೨ ॥ ವರ ಸೀತಾರಾಮ ಪದ । ಸರಸಿಜಕೆ ಮಧುಪಾ ॥ ಗುರು ಪ್ರಾಣೇಶ ವಿಠಲಾ । ನಿರಸಿಪ ಹೃದಯದಿ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## ಶ್ರೀ ಪ್ರಾಣೇಶ ದಾಸಾರ್ಯರ ಸ್ತೋತ್ರ.

೧೭. ಪದ, ರಾಗ–ಕಲ್ಯಾಣಿ (ಝಂಪೆತಾಳ).

ತೆರಳಿದರು ಪರಮ ತೋಷದಲಿ ಹರಿಪುರಕೇ ॥ ಹರಿ ಪ್ರೀಯ್ಯರಾದ ಪ್ರಾಣೇಶದಾಸರು ತ್ವರದಿ ॥ ಪಲ್ಲ ॥ ನಿರುತದಲಿ ಹರಿಪೂಜೆ ಮರಿಯದಲೆ ಮಾಡಿ ಬಲು । ಸ್ಥಿರಬುದ್ಧಿಪೂರ್ವಕದಲೀ ಗುರುಗಳೊಳು ಸರ್ವಜ್ಞ ರಾಯ ರಿಂದಧಿಕ । ಮತ್ತಿರಲುಂಟೆ ಎಂದು ತಿಳಹೀ ॥ ದುರುಳ ಜನರನುಸರಿಸದಲೆ ಕವಿಗಳೊಡನಾಡಿ । ಚರಿಸಿ ದೇಶಗಳಲ್ಲಿ ಮೆರದು ಖ್ಯಾತಿಯ ಪಡದು ॥ ೧ ॥ ಭಾಗವತ ಶ್ರೇಷ್ಠ ಜಗನ್ನಾಥ ದಾಸಾಖ್ಯರಡಿ । ಜಾಗುಮಾಡದಲರ್ಚಿಸೀ । ಭೋಗಿವರಶಯನ ಪ್ರಾಣೇಶವಿಠಲಾಂಕಿತವ । ಆ ಗುರುಗಳಿಂದ ಕೊಂಡೂ ॥ ರಾಗದ್ವೇಷಗಳೆಂಬ ಅರಿಗಳನು ಸಂಹರಿಸಿ । ರಾಗದಲಿ ಹರಿಕಥನ ಕವನರೂ ಪದಿ ಪೇಳ ॥ ೨ ॥ ಪ್ರಾಣನುತವನುಸರಿಸಿ ಆಚರಣೆಯನು ಮಾಡಿ । ಪ್ರಾಣಿ

ಗಳಿಗೇ ತಿಳಿಸದೇ । ಕ್ಷೋಣಿಯೊಳಗಿನ್ನು ಇರಸಾಕೆಂದು ಆ ಚಿತ್ರಭಾನು ಆಶ್ವಿಜ ಶುದ್ಧ ಸಪ್ತಮಿಯಲೀ ॥ ಜ್ಞಾನಪೂರ್ವಕದಿಲಯ ಚಿಂತನಿಯ ಮಾಡಿ ಗುರು । ಪ್ರಾಣೇಶವಿಠಲನಿದ್ವಾಪುರಕ ಜವದಿಂದ ॥ ३ ॥ ಶ್ರೀ ಮಧ್ವೇಶಾರ್ಪಣಮಸ್ತು ॥

## (ಉಪದೇಶಪರ ಪದ.)

೧೮. ಪದ, ರಾಗ–ಶಂಕರಾಭರಣ (ಆದಿತಾಳ).

ಯಾ ಯಾ ವರವ ನೀಡಿ ಶ್ರೀ । ಮಾಯಾ ರಮಣನ ಭಕುತರಿಗೇ ॥ ಪಲ್ಲ ॥ ಅರುಣೋದ ಕಾಲದಲೆದ್ದು ಶ್ರೀ । ಹರಿಸ್ಮರಣೆ, ಮಾಡುತಲಿದ್ದು ॥ ಕರಚರಣಾದ್ಯವಯವ ಶುದ್ಧಿ । ವಿರಚಿಸಿ ನಿರ್ಮಲಮನದಿ ॥ ೧ ॥ ಆದ್ಯಂತ ಗುರುವಾದ । ಮಧ್ವರಾಯರ ಮತವ ॥ ಪೊದ್ದಿದ ಭಗವದ್ದಾಸರು ಬಂದರೆ । ಇದ್ದಿಲ್ಲವು ಎಂದೆನಬ್ಯಾಡೀ ॥ ೨ ॥ ಘನಮಹಿಮ ನಾರಾಯಣನು ಇವ । ರನು ಕರತಂದಿಹನೆಂದರಿದೂ ॥ ಮನದಲ್ಲಿ ಯೋಚಿಸಿ । ಸನುಮಾನ ವನು ಮಾಡುತಲಿ ॥ ३ ॥ ಯಾಚನೆ ಮಾಡುವರೆಲ್ಲಾ ಬಲು । ನಾಚಿಕೆ ಉಳ್ಳವರೆಂದು ॥ ಖೇಚರವಾಹನ ಪ್ರಿಯರು ಶು । ದ್ಧಾಚರಣೆಯವರೆಂದು ॥ ೪ ॥ ನರರಂತೆ ಇವರಲ್ಲಾ । ಗುರು ಪ್ರಾಣೇಶವಿಠ್ಠಲನಂಘ್ರಿ ॥ ಸರಸೀಜ ಧೇನಿಸುತಾ ಯಂ । ಮ್ಮರಸುತ ಬಂದಿಹರೆಂದೂ ॥ ೫ ॥ ಶ್ರೀ ಗುರು ಮಧ್ವೇಶ ಕೃಷ್ಣಾರ್ಪಣಮಸ್ತು ॥

ಸದ್ವ್ಯಕ್ಕೆ ಉಪಲಬ್ಧವಾಗಿರುವ
ಶ್ರೀಗುರುಪ್ರಾಣೇಶ ವಿಠಲರ ಕೀರ್ತನಗಳು ಸಂಪೂರ್ಣವಾದವು.

**॥ ಶ್ರೀ ಗುರು ಮಧ್ವೇಶಾರ್ಪಣಮಸ್ತು ॥**

*

ಹರಿಃ ಓಂ



ಶ್ರೀಪ್ರಾಣೇಶ ದಾಸಾರ್ಯರ ದೌಹಿತ್ರರು,
ಶ್ರೀಗುರುಪ್ರಾಣೇಶ ವಿಠ್ಠಲರ ಪರಮ ಪ್ರಿಯ ಶಿಷ್ಯರೂ
ಅಪರೋಕ್ಷಿಗಳೂ ಆದ ರಾಮದಾಸರು ರಚಿಸಿದ
ಸದ್ಯ ಉಪಲಬ್ಧವಾಗಿರುವ

# ಶ್ರೀಶ ಪ್ರಾಣೇಶ ವಿಠಲರ ಕೀರ್ತನಗಳು.

೧. ಪದ, ರಾಗ–ಪೂರ್ವಿ (ಆದಿತಾಳ).

ದಯ ಮಾಡೊ, ದಯ ಮಾಡೊ । ಪಯಸಾಗರದೊಡೆಯನೆ ಶ್ರೀ ಕೃಷ್ಣಾ ॥ ಪಲ್ಲ ॥ ಬನ್ನಬಡಿಸುವರ್ಭಕನ ದುರಿತವ ॥ ಘನ್ನಮಹಿಮನೀ ಜವ ದಿಂತರಿದು ॥ ೧ ॥ ನೀ ಪೊರಿಯದೆ ಜರಿದರೆ ಕಾಯ್ವರನಾ ॥ ಈ ಪೊಡವಿ ಯೊಳೆಲ್ಲೆಲ್ಲೀ ಕಾಣೇ ॥ ೨ ॥ ಶೇಷಗಿರಿ ನಿಲಯ ಬಿನ್ನಪ ಲಾಲಿಸೋ ॥ ಶ್ರೀಶ ಪ್ರಾಣೇಶ ವಿಠಲ ದಯಾಳೋ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೨. ಪದ, (ತ್ರಿವಿಡಿತಾಳ).

ನೋಡಿ ನಾನು ಧನ್ಯನಾದೆನು ಅನಂತಶಯನನ । ನೋಡಿ ನಾನು ಧನ್ಯನಾದೆನು ॥ ನೋಡಿ ನಾನು ಧನ್ಯನಾದೆ । ರೂಢಿಯೊಳಗೆ ಮರುತ ಮಂದಿರ । ರೂಢ ಬೆಳಗಾವಿಯೊಳು ನಿಂದು ಈಡು ಇಲ್ಲದ ಮೆರವ ದೇವನ ॥ ಅನುಪಲ್ಲ ॥ ಮೂಲರೂಪನು, ವೈಕುಂಠ ಬಿಟ್ಟು । ಪಾಲಸಾಗರಶಾಯಿ ಶ್ರೀ

ಲೋಲ ॥ ಕಾಲಕಾಲದಿ ಭಕ್ತರ ಮೌಳಿ । ಪೊರಿಯಬೇಕೆಂದು ನಿಂದನ ॥ ೧ ॥ ಸಂತಾನ ಸಂಪತ್ತು ಜ್ಞಾನ ಸುಬುದ್ಧಿಯ । ನಂತಶಯನ । ಇವರಿಗಾ ॥ ನಂತ ಸುಖವನೀವೆನೆಂದು । ಸ್ವಾಂತದೊಳಗ ಬಂದು ನಿಂದನ ॥ ೨ ॥ ಶ್ರೀಶ ಪ್ರಾಣೇಶ ವಿಠಲರೇಯ । ಶ್ರೀ ಸಹಿತವಾಸವಾಗಿಲ್ಲಿ ॥ ಭೂಸುರೋತ್ತುಮ ಕಟ್ಟಯವರನ್ನ ಪೋಷಿಸಬೇಕೆಂದು ನಿಂದನ ॥ ೩ ॥ ಶ್ರೀ ಮಧ್ವೇಶಾರ್ಪಣ ಮಸ್ತು ॥

೩. ಪದ, (ಏಕತಾಳ).

ನಾರಾಯಣ ಗೋವಿಂದ । ಹರಿ । ನಾರಾಯಣ ಗೋವಿಂದ ॥ ಪಾರಾಶರ ಸುತನಂದ । ಹರಿನಾರಾಯಣ ಗೋವಿಂದ ॥ ಪಲ್ಲ ॥ ವೇದವ ಕದ್ದೊಯ್ಯಲು ಅತಮುನಾ । ಬಾಧಿಸಿ ನಿಗಮುವತಂದ ॥ ೧ ॥ ದಿವಿಜರು ಚ್ಯುತ ಬಲರಾಗಿರಲ ಮೃತವ । ದಿವಿಜರಿ ಗುಣಸಿದನಂದಾ ॥ ೨ ॥ ಖಳನು ಭೂಮಿಯಾ ಕದ್ದೊಯ್ಯಲು ತಾ । ಪೊಳವ ಕೋರಿಯಲಿ ತಂದಾ ॥ ೩ ॥ ತರುಳನ ಪರಿಪರಿ ಬಾಧಿಸುತಿರಲಾ ॥ ದುರುಳ ದೈತ್ಯನ ಕೊಂದ ॥ ೪ ॥ ಬಲಿಯುವರಾಧವ ನೊಂದೆಣಿಸದೆ ತಾ ॥ ವಲಿದು ಬಾಗಿಲಲಿನಿಂದಾ ॥ ೫ ॥ ಕ್ಷತ್ರಿಯ ಬಲವನ್ನೆಲ್ಲ ಸವರಿನಿ । ಕ್ಷತ್ರರ ಮಾಡಿದನಂದಾ ॥ ೬ ॥ ವರಮುನಿ ಶಾಪದಿ ಶಿಲೆಯಾಗಿರಲು ॥ ದ್ಧರಿಸಿದ ಪರಮಾನಂದಾ ॥ ೭ ॥ ಮಡದಿ ಗೋಪಿಯರ । ಒಡನಾಡಿದ ॥ ಪಾಲ್ಗಡಲಶಯನ ಮುಕ್ಕುಂದಾ ॥ ೮ ॥ ತ್ರಿಪುರದ ಸ್ತ್ರೀಯರ ವೃತಗೆಡಸಿದ ವಟು ॥ ವಪು ಮೃಡಮುಖ ಸುರವಂದ್ಯಾ ॥ ೯ ॥ ಪುರುಷೋತ್ತುಮಯುವನರ ಸಂಹರಸೀ ॥ ತುರಗವನೇರಿನಿಂದಾ ॥ ೧೦ ॥ ಶ್ರೀಶ ಪ್ರಾಣೇಶ ವಿಠಲ ಈ ಸರ್ವರ ॥ ಪೋಷಕ ನಾನಹುದೆಂದಾ ॥ ೧೧ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೪. ಪದ, ರಾಗ–ವರಾಳಿ (ಆದಿತಾಳ).

ಪಾಲಿಸಯ್ಯಾ ಶ್ರೀ । ಪ್ರಾಣರಾಯಾ । ಪಾಲಿಸಯ್ಯಾ ॥ ಪಾಲಿಸಯ್ಯ ಶ್ರೀಲೋಲನ ಭೃತ್ಯನೆ । ವಾಲಯುದಲಿ, ಮಹದುರಿತವ ತರಿದು ॥ ಪಲ್ಲ ॥ ಶರಣು ಪೊಕ್ಕವರ ಸಲಹುವನೆಂದು ॥ ವರವೇದಂಗಳು ಸಾರುತಲಿಹವೊ

|| ೧ || ಶಿಶುವಿನ ತಪ್ಪೆಣಿಸದೆ | ಆ ಜನನಿಯು | ಬಿಸುಟದೆ ತ್ವರದಿಂ | ಕರುಣ ಮಾಳ್ಪವೋ | ಲ್ || ೨ || ಶ್ರೀಶ ಪ್ರಾಣೇಶ ವಿಠಲನ ದಾಸಾಗ್ರಣಿ | ನೀ ಸದಾ ಕರುಣಿಸು ವೇಕ್ಷಮಾಡದೇ || ೩ || ಶ್ರೀ ಮಧ್ವೇಶಾರ್ಪಣಮಸ್ತು ||

೫. ಪದ, ರಾಗ–ಸೌರಾಷ್ಟ್ರ (ಆದಿತಾಳ).

ಸಂತಿಯ ಕೆಲವುರವಾಸಾ | ಭಾರತಿ ಕಾಂತನು ಶ್ರೀ | ಹರಿದಾಸಾ || ಸಂತತ ಸೇವಿಪರಘ ಓಡಿಸಿ | ನಿಶ್ಚಿಂತರಮಾಡಿ ಪೊರೆವ ದಯಾಳೋ || ಪಲ್ಲ|| ದಾಶರಥಿಯ ಪದಕೆರಗೀ | ನಿಂದು | ಲೇನಾಗಿ ತುತಿಸುವಯೋಗೀ || ಸಾಸಿರ ನಾಮನ ರಾಣಿಯು ಕಂಡು | ತೋಷದಿ ಸ್ವಾಮಿಗೆ ವಾರ್ತೆಯ ಪೇಳಿದ || ೧ || ಕುಂತಿ ಕುಮಾರಕ ನೆನಸೀ | ಮಹ | ಹಂತ ಕೌರುವರ ನೊರಸೀ || ಕಾಂತಿಗೆ ಸೌಗಂಧಿಕ ಪುಷ್ಪವ ಮುಡಿಸಿ | ಶ್ರೀಕಾಂತನ ಪ್ರಿಯ ಭೂಭಾರವ ನಿಳುಹಿದ || ೨ || ಆನಂದ ತೀರಥರಾಗಿ | ವರ | ಮಾನಂದದಿ | ಕುಮತವ ನೀಗೀ || ನಂದನಸುತ ಶ್ರೀಶಾ ಪ್ರಾಣೇಶ ವಿಠ್ಠಲಾ ನಂದನೆಪರನೆಂದು ಡಂಗುರ ಸಾರಿದ || ೩ ||

೬. ಪದ, ರಾಗ–ವರಾಳಿ (ಆದಿತಾಳ).

ಬಾಗಿಸೋಪಿಲಿ ವಾಸವಾಗಿಹ ಯೋಗಿ ಪ್ರಾಣರಾಯಾ || ಜಾಗು ಮಾಡದೆ ಭಕ್ತರ ದುರಿತವ ನೀಗಿ ಸಲಹಯ್ಯಾ || ಪಲ್ಲ || ಕಪಿಗಳೆಲ್ಲಾ ಸುಗ್ರೀವನ ಭಯದಿಂ ತಪಿಸುತಲಿರೆ ಅವರಾ || ಲಪನ ಕಾಣುತಲೆ ಅಭಯವನಿತ್ತು | ನೀ | ಪೊರದೆ ಕಪಿವರಾ || ೧ || ಹಿಂದೆ ಭೂಸುರನು ಚಿಂತಿಸುತಿರಲಾ | ನಂದದಿಂದ ಅವನಾ || ಬಂಧನ ಬಿಡಸಿದ | ಬಕನನು ಕೊಂದು | ತಂದೇ ಶ್ರೀ ಪವನಾ || ೨ || ಈಶನ ಸಾಸೆಂತೆಂಬುವ ಖಳರಾ | ಸೋಸಿನಲ್ಲಿ ಮುರಿದೇ || ಶ್ರೀಶ ಪ್ರಾಣೇಶ ವಿಠ್ಠಲರಾಯನ | ಪರದೈವೆಂದೊರದೇ || ೩ ||

೭. ಪದ, ರಾಗ–ಮಾರವಿ (ಅಟತಾಳ).

ಪ್ರಾಣರಾಯ ನೀನಲ್ಲದೆ ಮತ್ತನ್ಯ ಪ್ರಾಣರುಜಗದೊಳುಂಟೇ || ದೀನ ರಕ್ಷಕನೆಂಬ ಬಿರುದಿಗೆ | ಪ್ರೇಮದಿನೀನೇ ರಕ್ಷಿಸಬೇಕೈ | ಪರಾಕೈ || ಪಲ್ಲ ||

ಹಿಂದೆ ಭಕತರನು ಪೊರೆದ ನಂಬದು ಕೇಳಿ । ಬಂದು ವಂದಿಸುವೆ ನಿನ್ನ ॥ ಕಂದನ ಅಪರಾಧ ಸೀನೆಣಿಸದೆ । ಭವಬಂಧನ ಪರಿಹರಿಸೋ । ಉದ್ಧರಿಸೋ ॥ ೧ ॥ ವಂದಿಪ ಶರಣರ ಪೊರಿಯು ಬೇಕೆನುತಲಿ । ಬಂದು ಬಾಗಿಸೋಪಿಲಿ ॥ ಭಂದದಿ ವನದೊಳು । ನಿಂದಾದಲತ । ಗೋವಿಂದ ರಾಯುಗವಲಿದೀ । ನೀನ ಲಿದೀ ॥ ೨ ॥ ಈ ಸುಮುಹಿಮೆಯನು ತುತಿಸಲು । ಖಗ । ಪಾರ್ವತೀ ಶರಿಗಸ ದಳವೈ ॥ ಶ್ರೀಶ ಪ್ರಾಣೇಶ ವಿಠಲನ ದಾಸಾಗ್ರಣಿ । ಈ ಸನುಂಯುದಿ । ಪಾಲಿ ಸೋ । ಲಾಲಿಸೋ ॥ ೩ ॥

೮. ಪದ, ರಾಗ–ಕೇದಾರಗೌಳ (ಆದಿತಾಳ).

ಗೇಣರಾಯ ನಿನ್ನಾ ಮಹಿಮೆಯ ಸ್ಥಾಣು ಅರಿಯ ಮುನ್ನಾ । ದೀನರಕ್ಷಕನೆಂಬೊ ಬಿರಿದು ಕೇಳಿತವ । ಧ್ಯಾನವ ಕೊಡು ಎಂದೇ । ತಂದೇ ॥ ಪಲ್ಲ ॥ ರವಿಜನ ಭಯುದಿಂಬಾ । ಕಪಿಗಳು ಲಯುಚಿಂತೆಗಳಿಂದಾ ॥ ಪವನ ಕುವರ ಕಂಡಾಕ್ಷಣ ಈ ಭಯ । ತವಕನಟ್ಟ ಪೊರದೀ ಮೆರದೀ ॥ ೧ ॥ ಭೂಸೂರ ಚಿಂತಿಸೆ ಬರಿದೀ । ಈ । ಮೊರಿಕೇಳಿ ಆ ಶಿಶುವಿನ ಉಳುಹಿದೀ ॥ ಘಾಸಿಗೊಳಿಸುವ । ಖಳ ಬಕನೊರಸಿ । ಭಾಸುರ ಕೀರ್ತಿಯ ಪೊರದಿ । ಇಷ್ಟಾರ್ಥವ ಕರದೀ ॥ ೨ ॥ ಧರಿಯೊಳು ಚಿಲಕರಾಗಿ ಗ್ರಾಮದೊಳು ಮೆರೆ ಯುವ ಯತಿಯೋಗೀ ॥ ಗುರು ಶ್ರೀಶ ಪ್ರಾಣೇಶ ವಿಠ್ಠಲನ ಚರಣ । ಪೊಕ್ಕ ವರ ಸಲಹುವ ಕರುಣೀ ॥ ಯೇಧಣಿ ॥ ೩ ॥

೯. ಪದ, ರಾಗ–ಭೈರವಿ (ಆದಿತಾಳ).

ರಾಯರ ನೋಡಿರೈ ಶ್ರೀ । ಗುರುರಾಯರ ಪಾಡಿರೈ ॥ ಶ್ರೀಯರಸನ ಪ್ರಿಯ ಕಂಜಾಪ್ತಾ ಭಸುಕಾಯಾ । ಕವಿಜನಗೇಯಾ ॥ ಪಲ್ಲ ॥ ಶ್ರೀ ಸುಧೀಂದ್ರ ಕರಕಮಲದಲಿ ಸಂಭೂತಾ । ಬಹು ವಿಖ್ಯಾತಾ । ಶ್ರೀಶನ ಗುಣ ಗಳ ತುತಿಸುವ ಯತಿ ಶಿರೊಮಣಿಯೊ । ಚಿಂತಾಮಣಿಯೊ । ಈ ಸುಜನರ ಮನಸಿಗೆ ತೋರುವದಹಲ್ಲಾದಾ । ಶಿರಿಪ್ರಲ್ಹಾದಾ ॥ ೧ ॥ ದಂಡಕ ಮಂಡುಲ ಕಾಷಾಯುವು ಸೂವಸನಾ । ವೇದವ್ಯಸನಾ । ಪುಂಡರೀಕ ವದಭೃಂಗಾ ಮುನಿಕುಲೊತ್ತುಂಗಾ । ಕರುಣಾಪಾಂಗಾ ॥ ಮಂಡಲದೊಳು ಬಹುತೋಂಡರ

ಪರಿಪಾಲಕಾ । ವರ ಬಾಲ್ಹೀಕಾ ॥ ೨ ॥ ತುಂಗಾತೀರದಿ ಮಂತ್ರಾಲಯದೊಳ ಗಿರುವೊ । ಕಲ್ಪತರುವೊ । ಗಂಗಾಜನಕ ವಿಹಂಗವಾಹನ ಇಲ್ಲಿಹನು । ನತ ಸುರಧೇನೂ ॥ ಮಂಗಳ ಮಹಿಮರ ದರುಶನ ಮಾತ್ರ ಘನಾಶಾ । ಶ್ರೀ ಗುರು ವ್ಯಾಸಾ ॥ ೩ ॥ ಪರಿಮಳ ವಿರಚಿಸಿ ಬುಧರಿಗೆ ಬೀರಿದಧೀರಾ । ಗುಣಗಂಭೀ ರಾ । ಪರಿಪರಿ ಚರಿತೆಯ ತೋರ್ದ । ಭೂದೇವರದೇವಾ । ದೇವಸ್ವಭಾವಾ ॥ ನರ ಇವರನ ಕ್ಷಣಬಿಡದಲೆ ಭಜಿಸಲು ಸುಖವೂ । (ಅಘವರಿಹರವೂ) ಅಹಿ ಕಾಮುಕವೂ ॥ ೪ ॥ ದುಷ್ಟ ಮತವ ಖಂಡಿಸಿ ಹರಿವರನೆಂದೊರದಾ । ಭೀಷ್ಟಿ ಯುಗರದಾ । ಸೃಷ್ಟಿಯೊಳಗೆ ಶ್ರೀಶ ಪ್ರಾಣೇಶ ವಿಠಲನ ದಾಸಾ । ಮುನಿಕುಲೊ ತ್ತಂಸಾ ॥ ಎಷ್ಟು ಪೊಗಳಲಾಶಕ್ಯ್ಯವು ಸದ್ಗುಣಸಾಂದ್ರಾ । ಶ್ರೀ ರಾಘವೆಂದ್ರಾ ॥ ೫ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೦. ಪದ, ರಾಗ–ಪೂರ್ವಿ (ಆದಿತಾಳ).

ಶ್ರಿ ರಾಘವೆಂದ್ರ ರಾಯಾ ಸೂರಿ ಪರಾಕೂ । ಪರಿಮಳ ವಿರಚಿಸಿದ ವನೆ ಪರಾಕು ॥ ಧರೆಯೊಳು ಮಂತ್ರಾಲಯ ನಿಲಯ ಪರಾಕು । ಗುರು ಸುಧೇಂದ್ರರ ಕುವರ ಪರಾಕೆಂದು । ಹರದೆರಾರುತಿಯಾ ಬೆಳಗಿರೆ ॥ ೧ ॥ ಪಂಡಕ ಮಂಡಲಧರ ಪರಾಕೂ । ಪಂಡಿತರೊಡಿಯ ವಿಕ್ರಮನೆ ಪರಾಕೂ ॥ ಚಂಡದುರ್ವಾದಿ ಮತಮುರಿದ ಪರಾಕು । ಗಂಡುಗಲೀಹರಿಯಾ, ಪರಾ ಕೆಂದು ಪುಂಡಲೀಕ ದಾರುತಿಯಾ ಬೆಳಗೀರೆ ॥ ೨ ॥ ಶ್ರೀಶ ಪ್ರಾಣೇಶ ವಿಠಲಾ ದೂತ ಪರಾಕೂ । ಶ್ರೀಶನ ಗುಣಗಳ ತುತಿಪ ಪರಾಕೂ ॥ ಆಶೇತು ಹೇಮಂತ ಮೆರವ ಪರಾಕು । ದೇಶಿಕ ಶ್ರೇಷ್ಠ ನಿರ್ದುಷ್ಟ ಪರಾಕೆಂದು ಸಾಸಿರ ಆರುತಿಯಾ ಬೆಳಗಿರೆ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

೧೧. ಪದ, (ಏಕತಾಳ).

ದಾಸರ ಭಾಗ್ಯವಿದು । ಶ್ರೀ ಹರಿ । ದಾಸರ ಭಾಗ್ಯವಿದು ॥ ಪಲ್ಲ ॥ ತರುಳತನದಿ ಬಲು ಮಂದ ಬುದ್ಧಿಯಲಿ । ತರುಳರಕರಕರೀ ಬಡಿಸುವನಾ ॥ ಕರವಪಿಡಿದು ಉದ್ಧರಿಸಿ ನಾಮಾಮೃತ । ಎರದು ದೇಶದೋಳ್ ಮೆರಸಿದಿ

ಎಲ್ಲಾ ॥ ೧ ॥ ಪದಸುಳಾದಿಗಳು ತಾಳಪ್ರಾಸದಿಂ । ಪದುಮನಾಭನ ಚರಿತೆಯನೂ ॥ ಮುದದಿಂದಲಿ ಕೊಂಡಾಡುತ ವದನದಿ । ಪದಪದಿಗೆ ಅಡಿಗೆರಗುವದೆಲ್ಲಾ ॥ ೨ ॥ ಯೇಸು ಜನ್ಮದಾ ಸುಕೃತೊದಗಿತೊ ಹರಿ । ದಾಸಾರ್ಯರು. ಇತ್ತರು ಪದವಾ ॥ ಶ್ರೀಶ ಪ್ರಾಣೇಶ ವಿಠ್ಠಲ ದಾಸಾರ್ಯರ । ದಾಸರದಾಸನು ಎನಿಸುವದೆಲ್ಲಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೨. ಪದ, ರಾಗ-ಕಾಂಬೋಧಿ (ಆದಿತಾಳ).

ದಾಸರಾಯರಾ ಚರಣ ಕಮಲ ಭಜಿಸೋ । ದುರ್ವಿಷಯವ ತ್ಯಜಿಸೋ । ಶ್ರೀಶಭಜಕ ಗುರು ಪ್ರಾಣೇಶ ದಾಸಾರ್ಯರ್ಶ । ಹರಿದಾಸಾವರ್ಯಾ ॥ ಪಲ್ಲಾ ॥ ಸದ್ವೈಷ್ಣವ ಅಧ್ಯಕ್ಷರೆಂದಿನಿಪರೊ । ಕರ್ಮಠರರೆನಿಪರೊ । ಮಧ್ವಮತ ಪ್ರವರ್ತಕರೆನಿಪರೊ । ಜ್ಞಾನಿಗಳೆನಿಪರೊ ॥ ಪದ್ಧತಿಪೂರ್ವಕ ಕವನವ ಪೇಳುವರೊ । ಹರಿಪರನೆಂಬುವರೊ ! ಶುದ್ಧಾತ್ಮರಿಗತಿ ಪ್ರಿಯರೆಂದೆನಿಸುವರೊ । ಸತ್ಕಥಾಲಾಪರೊ ॥ ೧ ॥ ಕಾಮಕ್ರೋಧ ಮದಮತ್ಸರವನು ಗೆಲಿದೂ । ತಾಮಸರನು ಹಳಿದೂ । ನೇಮದಿಂದಯಮ ನಿಯಮಗಳನು ವಹಿಸೀ । ಇಂದ್ರಿಯಗಳ ಜೈಸೀ । ತಾಮುದದಿಂದಲಿ ಹರಿಗುಣ ಕೀರ್ತನೆಯಾ । ಮಾಡುತ ನರ್ತನೆಯಾ ॥ ಪ್ರೇಮದಿಂದ ನಾಡಿ ದೇಶದಲ್ಲಿ ಮೆರೆದಾ । ನಾಮಸುಧೆಯನ್ನೆರದಾ ॥ ೨ ॥ ಯೇಸು ಪೇಳಲಿ ಇವರ ಚರಿತೆಯನ್ನು । ಆಪಾರವು ಇನ್ನೂ । ಸೋಸಿ ನೋಡಲು ಎನಗೆ ವಶವಲ್ಲಾ । ಇದು ಪುಸಿಯು ಅಲ್ಲಾ ॥ ವಿೂಸಲ ಮನದಲಿ ತುತಿಸಲು ಸಂತಾಪಾ । ಪೋಪದುನಿರ್ಲೇಪಾ । ಶ್ರೀಶಾ ಪ್ರಾಣೇಶ ವಿಠ್ಠಲತಾಬಲ್ಲಾ । ವಲಿದೀಹನಲ್ಲಾ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

### ೧೩. ಪದ, ರಾಗ–ಕೇದಾರಗೌಳ (ಆದಿತಾಳ).

ಪೋಷಿಸೆನ್ನ ಜೀಯಾ । ಗುರು । ಪ್ರಾಣೇಶ ದಾಸರಾಯಾ ॥ ಶ್ರೀಶನ ಗುಣ ಸಂತೋಷದಿ ಪಾಡುವ । ದಾಸ ಕುಲಾಗ್ರಣಿಯೋ । ಎಣಿಯೆ ॥ ಪಲ್ಲ ॥ ಹರಿ ಸ್ಮರಣೆಯ ಮರೆದೂ । ಸರ್ವದ । ಪರರನ್ನಕೆ ಬೆರೆದೂ ॥ ದುರುಳ ಜನರ

ಸಹವಾಸವನ್ನು ಮಾಡಿ । ಬರಿದೆ ದಿನವ ಕಳದೇ ಉಳದೇ ॥ ೧ ॥ ಪವನ ಮತದೊಳಿಟ್ಟೊ । ಶ್ರೀಹರಿ । ಸ್ತವನನ್ನೆ ಕೊಟ್ಟೊ ॥ ಕವಿಗಳ ಮುಖದಿಂ ತತ್ವ ವಿಚಾರದಿ । ಕವಲ ಮ । ತಿಯ ಪಾಲಿಸೀ ಉದ್ಧರಿಸೀ ॥ ೨ ॥ ಯನ್ನ ಬಿನ್ನಿವ ವನ್ನು । ಕೇಳಿ । ಮನ್ನಿಸು ಸುರಧೇನೂ ॥ ಘನ್ನ ಶ್ರೀಶ ಪ್ರಾಣೇಶ ವಿಠಲನ ಧ್ಯಾನ । ವನ್ನು । ಮಾಳ್ಪ ಶಕ್ತಾವಿರಕ್ತಾ ॥ ೩ ॥ ಶ್ರೀ ಮಧ್ವೇಶಾರ್ಪಣ ಮಸ್ತು ॥

೧೪. ಪದ, ರಾಗ–ಕಾಂಬೋಧಿ (ಝಂಪೆತಾಳ).

ವಾಸುದೇವನ ಪುರಕೆ ತೆರಳಿದಾರು । ಶ್ರೀಶನಾ ಪ್ರೀಯ ಗುರು ಪ್ರಾಣೇಶ ದಾಸಾರ್ಯ ॥ ಪಲ್ಲ ॥ ಸ್ನಾನ ಊರ್ಧ್ವಪುಂಡ್ರಗಳ ವಿಧಿಯಿಂ ಧರಿಸೀಸಂ । ಧ್ಯಾನ ಗಾಯತ್ರಿ ಜಪವನ್ನು ಮಾಡೀ ॥ ಸಾನುರಾಗದಿ ಬಿಂಬ ಮೂರ್ತಿ ಧ್ಯಾನ ಮಾಡೀ ತತ್ವ । ಮಾನಿಗಳೊಳೊಮ್ಮಿಂದೊಮ್ಮೆ ಆನಂದ ದಿಂದಲೀ । ವಾಂ ॥ ೧ ॥ ಹರಿಯೆ ಸರ್ವೊತ್ತುಮಾ ತದ್ರಾಣಿ ಶಿರಿಬೊಮ್ಮ । ಮರುತದೇವರೆ ಗುರುವು ತಾರತಮ್ಯಾ ॥ ವರಪಂಚಭೇದ ಜ್ಞಾನವನರಿತು । ಮನದಿ ಹರಿ । ಪುರದೊಳಿಹ । ಪರಮ ಭಕ್ತರ ಕಾಣಬೇಕೆನುತ ॥ ೨ ॥ ಮೋಕ್ಷರೌದ್ರೀ ಅಬ್ಬಮಾಘದರ್ಶ ಪೂರ್ವಭಾದ್ರರಾ । ನಕ್ಷತ್ರ ಸೋಮ ವಾರಾದಿವ ದ್ವಿತಿಯ ಯಾಮದೀ ॥ ಲಕ್ಷ್ಮಿ ಇಟ್ಟೊ ಲಯದ ಚಿಂತನೆಯ ಗೈಯುತಲಿ ಪಕ್ಷಿವಾಹನ ಶ್ರೀಶ ಪ್ರಾಣೇಶ ವಿಠಲೆನುತ ॥ ೩ ॥ ಶ್ರೀ ಮಧ್ವೇಶಾರ್ಪಣಮಸ್ತು ॥

हरी: ॐ

**वादि विजय शीलायवरदाय वरार्थिनां ।**

**वदान्यजन सिंहाय वरदेंद्रायतेनमः ॥**

ಶ್ರೀ ವರದೇಂದ್ರ ಸ್ವಾಮಿಗಳವರು

ಶ್ರೀಪ್ರಾಣೇಶ ದಾಸಾರ್ಯರಿಗೆ ಒಲಿದು

ಪುಣೆಯಿಂದ ಲಿಂಗಸೂಗೂರಿಗೆ (ದಯಪಾಲಿಸಿದ),

ವರದೇಶ ವಿಠಲ ವಿರಚಿತ

# ಸ್ವಪ್ನ ವೃಂದಾವನಾಖ್ಯಾನ.

हरी: ॐ

**॥ श्री लक्ष्मीवेंकटेशप्रसन्न: ॥**

**श्रीगुराजांतर्गत श्रीगुरुजगन्नाथविठलायनमः**

**॥ श्रीवरदेंद्रगुरुप्रसन्न: ॥**

## ಶ್ರೀ ಗುರು ವರದೇಂದ್ರ ಸ್ವಾಮಿಗಳವರ ಸ್ವಪ್ನ ವೃಂದಾವನ ಚರಿತ್ರೆ.

॥ ಶ್ರೀರಸ್ತು ॥ ವಾರ್ಧಿಕ (ಷಟ್ಪದಿ).

ಶಿರಿಬೊಮ್ಮ ಮರುತ ಶಿವ ಉರಗಪತಿ ಗಿರಿಜೇಶ । ಸುರಪಾಂಗ ಜಾತ ಮುಖ, ಸುರವೃಂದವಿನುತ ಪದ । ಶರಧನುರ್ಧಾರಕರ ಶಿರಿ ಜಾನಕೀಶ ಪದ, ಸರಸಿರುಹ ಕಾನಮಿಪೆನಾಂ ॥ ವರದೇಂದ್ರ ಗುರುವರರ ಸುರುಚಿರಾಗಮದ ಕಥೆ । ಬರೆವದಕೆ ನಿರ್ವಿಘ್ನ, ವರಸುಮಂಗಳಗಳನು । ಪರಿಪಾಲಿಸುವದೆಂದು, ಕರಮುಗಿದು ಯಾಚಿಸುವೆ ಹರುಷದಿಂ ಗುರುಹಿರಿಯರಾ ॥ ೧ ॥

**ಭಾಮಿನಿಷಟ್ಪದಿ (ತ್ರಿಪುಡೆತಾಳ).**

**ರಾಘವೆಂದ್ರರ ಕರುಣ ಪಡದಿಹ । ಯೋಗಿವರದೇಂದ್ರಾಖ್ಯ ಗುರುಗಳು । ಜಾಗುಮಾಡದೆ ಬಂದ ರೊಮ್ಮಿಗೆ ಲಿಂಗಸೂಗುರ ಗ್ರಾಮದೀ ॥ ಭಾಗವತ**

ರೋಳ್ ಶ್ರೇಷ್ಠರೆನಿಸುವ । ಯೋಗಪತಿ ಕರಣಿಕರ ಗೃಹದಲಿ । ಸಾಗಿ ಬರು
ತಿಹ ಸಂಭ್ರಮವನಾನೆಂತು ಬಣ್ಣಿಪೆನೋ ॥ ೧ ॥ ॥ ೨ ॥

ಪದ, ರಾಗ–ರೇಗುಪ್ತಿ (ಆದಿತಾಳ).

ಬಂದರು ಗುರುವರರೂ ಚಂದದಿ ಶ್ರೀ ವರದೇಂದ್ರ ಮುನಿಪರೂ ॥ ಬಂದರು ॥ ಪಲ್ಲ ॥ ಕುಂದಣಮಯವಾದಂದಣೇರಿ ದ್ವಿಜ । ವೃಂದ ಮಧ್ಯದೋಳ್ ಅಂದದಿ ಮೆರಿಯುತ ॥ ೧ ॥ ಭೇರಿ ವಾದ್ಯ ಶ್ರಿಂಗಾರದಿ ಮೆರೆಯುತ ॥ ಸೂರಿಗಳರಸರಪಾರ ಮಹಿಮರೂ ॥ ೨ ॥ ಧ್ವಜ ಪತಾಕೆಗಳು ಭಜಿಪ ಭಟರುದಿ ॥ ದಿಗ್ವಿಜಯಿಪಯತಿ ವರರಜನಿಪತಿಯುತೆರ ॥ ೩ ॥ ದಂಡಕ ಮಂಡುಲಕೊಂಡು ಕರದಿ ಭೂ ॥ ಮಂಡಲದೊಳು ಉದ್ದಂಡ ಪಂಡಿತರು ॥ ೪ ॥ ವರದೇಶ ವಿಠಲನ ಕರುಣದಿ ಧರೆಯೊಳು ॥ ಮೆರೆಯುವ ಹರಿಮತ ಶರಧಿ ಚಂದಿರರೂ ॥ ೫ ॥ ॥ ೬ ॥

ಶ್ರೀ ವರದೇಂದ್ರ ಸ್ವಾಮಿಗಳು ಲಿಂಗಸೂಗೂರಿಗೆ ದಿಗ್ವಿಜಯಮಾಡಿದಾಗ್ಯೆ, ಸ್ವಂತ ಶ್ರೀಪ್ರಾಣೇಶ ದಾಸಾರ್ಯರು, ಮಾಡಿದ ಸ್ತೋತ್ರವು ಇಲ್ಲಿ ಅಚ್ಚು ಹಾಕಿಸಲ್ಪಡುತ್ತದೆ.

ಪದ, ರಾಗ–ಭೈರವಿ (ಅಟತಾಳ).

ಹಿಂದಿನ ಸೂಕರ್ಮವೇ ಸು । ಬಂದೋದಗಿದವೊ, ವರ । ದೇಂದ್ರ ರಾಯಾ ಬಂದ ನಮ್ಮ ಮಂದಿರಕಿಂದೂ ॥ ಪಲ್ಲ ॥ ಮುತ್ತಿನ ಅಂದಣದೊಳು ಸತ್ತಿಗಿನೆರಳಿಲಿ ಪ್ರ। ಶಸ್ತವಾಗಿ ವೇದಶಾಸ್ತ್ರ ವತ್ತಿ ಓದೂವ ॥ ಉತ್ತಮಬುಧರ ಕೂಡ ಭ್ರತ್ಯರ ಸಂಗಡ ಬಹು । ಹತ್ತೆಂಟು ಬಿರುದಾವಳಿ ಯುಕ್ತಬಂದರೂ ॥ ೧ ॥ ತಂಡತಂಡಕ್ಕೆ ಜನರು ಹಿಂಡುಗೂಡಿ ಫಲಗಳ । ಕೊಂಡು ಬಂದು ಮಾಡುವರು ದಂಡ ಪ್ರಣಾಮಾ ॥ ಪಂಡಿತಾಗ್ರಗಣ್ಯರು ಭೂಮಂಡಲದೊಳಾಗ ಶ್ರೀಯಾ । ಖಂಡಲನಂತೆ ತೋರ್ಪಾ ಕಮಂಡಲಧರ ॥ ೨ ॥ ಶ್ರೀಕರ ಪ್ರಾಣೇಶ ವಿಠಲಾ । ನೇ ಕಾಂತದಿವಲಿಸುವಲ್ಲಿ• ಈ ಕುಂಭಿಣಿಯೊಳಗೀತಗೆ ಕಾಣೆನೀಡ ॥ ನೀ ಕಾಯಾಬೇಕೆಂದವರ ಶೋಕವ ಪರಿಹರಿಸಿ, । ಜೋಕೆ ಮಾಡುವ ನಿತ್ಯ ದೇಶಿಕ ಕುಲಪತೀ ॥ ೩ ॥

(ಆರ್ಯವೃತ್ತ.)

ಯತಿವರ ಗೃಹದಲಿ ಬರಲು ಮುದದಿ ಆರತಿಯನೆತ್ತಿ ಒಳಬರಮಾಡೀ॥ ಅತಿಹರುಷದಿ ಪೂಜಿಸಿ ಸಂಭ್ರಮದಲಿ । ತುತಿಸುವರೀವರಿಯಲಿ ನೋಡಿ ॥ ೧ ॥ ॥ ೮ ॥

ಪದ, ರಾಗ–ಬೆಹಾಗ (ರೂಪಕತಾಳ).

ಧನ್ಯವಾಯಿತೆನ್ನ ವಂಶವೂ । ಈ ದಿವಸದಲ್ಲಿ ಧನ್ಯವಾಯಿತೆನ್ನ ವಂಶವೂ ॥ ಪಲ್ಲ ॥ ಧನ್ನ್ಯವಾಯಿತೆನ್ನ ವಂಶಯಿನ್ನು ಭವದತಾಪವೆಲ್ಲಿ। ಚನ್ನ ಶ್ರೀ ಗುರು ವರರು ಬಂದು ಯನ್ನನುದ್ಧರಿಸಿದರಿಂದು ॥ ಅನುಪಲ್ಲ ॥ ಶಿರವು ಬಾಗಿತಿವರ ಪದಕೆ। ಕರಗಳಿವರ ಪೂಜಿಸಿದವು॥ ಸ್ಮರಣಿ ಮಾತ್ರದಿಂದ ದುರಿತ । ತರಿವ ಗುರು ಗಳನ್ನು ನೋಡಿ ॥ ೧ ॥ ಸಕಲ ತೀರ್ಥಕ್ಷೇತ್ರ ಫಲವು । ನಿಖಿಳ ದಾನಧರ್ಮ ಫಲವು ॥ ಮುಕುತಿ ಸಾಧನಗಳು ಸದ್ವಿ। ರ ಕುತರಿದ್ದ ಎಡಿಯೊಳಿಹವು ॥ ೨ ॥ ಹರಿಯು ಶಿರಿಯು, ಮರುತ ಗಿರೀಶ । ಸುರರು ಯಿವರ ಹೃದಯ ದಲ್ಲಿ ॥ ಇರುವ ಕಾರಣಿ ವರ ಪೂಜೆ । ಹರಿಯ ಪೂಜೆ ಎನಿಸುತಿಹದು ॥ ೩ ॥ ಆವ ಪರಿಯಲಿ ವರಚರಣ । ಸೇವೆ ಮಾಡಿ ನಮಿಸಿದವನ ॥ ನೋವು ಕ್ಲೇಶವೆಲ್ಲ ತೊಲಗಿ । ದೇವದೇವನೊಲಿಮೆಯಹದು ॥ ೪ ॥ ದಾಸರಾದ ಜನರ ದೋಷ । ರಾಶಿಯನ್ನು ದಹಿಸಿ ಶ್ರೀವರ । ದೇಶ ವಿಠ್ಠಲನ್ನ ತೋರ್ವ । ರಾಸುಮಹಿಮೆ ಯೇಸು ಪೇಳ್ವೆ ॥ ೫ ॥ ॥ ೧೩ ॥

ಪದ, ರಾಗ–ಬೆಹಾಗ (ರೂಪಕತಾಳ).

ಸಾಕು ಮಾಡಿ ದಾಸವರ್ಯರೇ । ಈ ಸ್ತವನವನ್ನು ಸಾಕು ಮಾಡಿ ದಾಸವರ್ಯರೇ ॥ ಪ ॥ ಸಾಕು ಮಾಡಿರಿನ್ನು ನಿಮ್ಮ ವಾಕು । ಎಷ್ಟು ವರ್ಣಿ ಸುವಿರಿ ॥ ಲೋಕನಾಥ ಪಾದಭಕುತಿ ಸೋಕಿದವರು ಎಲ್ಲರಿಂತ ॥ ಉಪ ಪಲ್ಲ॥ ಕಾಸಿ ರಾಮೇಶ್ವರಾದಿ। ಆ ಸುತೀರ್ಥ ಕ್ಷೇತ್ರವೆಲ್ಲ ॥ ದಾಸರಿದ್ದ ಸ್ಥಳದಲಿ ಹವು। ಲೇಶ ಸಂಶಯವು ಸಲ್ಲ ॥ ೧ ॥ ದಾಸರಿಂದ ಹರಿಯು ಸುಪ್ರ। ಕಾಶವನ್ನು ಐದಿ ಇಹನು॥ ದಾಸರಿಂದ ನಾವು ಸ। ನ್ಯಾಸ ಕಾದುಕೊಂಡು ಇಹೆವು ॥ ೨ ॥ ದಾಸರಿಲ್ಲದೀಹ ಸ್ಥಳವ । ಶ್ರೀಶನೊಲ್ಲ ಅಲ್ಲಿ ಸ। ನ್ಯಾಸಿಗಾಳು ಎಂದಿಗೊಲ್ಲ । ರೀಸು ವಾಕ್ಯ ಸಟಯು ಅಲ್ಲ ॥ ೩ ॥ ಸಕಲ ಯಜ್ಞಯಾಗಫಲವು । ನಿಖಿಳ

ವೇದಶಾಸ್ತ್ರಫಲವು । ಅಖಿಳಮಂತ್ರ ಜಪದಫಲವು । ಭಕುತಿಮಾರ್ಗದಿಂದೆ ಇಹವು ॥ ೪ ॥ ದಾಸ್ಯತನದ ಮಹಿಮೆಯು ವರ । ದೇಶ ವಿಠ್ಠಲನ್ನ ನೈಜ । ದಾಸ ಜನರೆ ಬಲ್ಲರಿದನು । ದೋಷಿಗಾಳು ಅರಿವರೆಂತು ॥ ೫ ॥ ॥ ೧೮ ॥

(ಆರ್ಯವೃತ್ತ.)

ಎತ್ತನೋಡೆ ಶ್ರಿಂಗಾರಗೃಹದಿ ಆ । ತಿಥ್ಯದ ಸಂಭ್ರಮದೋರುವದೂ ॥ ಸುತ್ತಲಪ್ರಾಂತದ ದ್ವಿಜರಸಂದಣಿಯು । ಜತ್ತಿಜತ್ತಿಲಿ ಬರುತಿಹದೂ ॥ ೧ ॥ ಎತ್ತನೋಡಲು ವೇದಘೋಷವು । ಎತ್ತಲಿ ಹರಿಗುಣಗಾಯನವೂ ॥ ಉತ್ತುಮಾಸನದಿ ಕುಳಿತು ಗುರುವರರು । ತತ್ವವಿಚಾರವ ನಡಿಸಿಹರೂ ॥ ೨ ॥ ಭಕ್ತಜನರುಗಳು, ಕಾಣಿಕಿ ತಮ್ಮಯ । ಶಕ್ತ್ಯನುಸಾರದಿ ಕೂಡುತಿಹರೂ ॥ ತಪ್ತಮುದ್ರಿಗಳಕೊಂಡು ಗುರುವರರ । ತುತ್ತಿಸಿ ಮೋದವಬಡುತಿಹರೂ ॥ ೩ ॥ ತರುವಾಯದಿ ಗುರುವರು ಸ್ನಾನಗೈ । ದರು ಶಾಸ್ತ್ರೋಕ್ತ ವಿಧಿಯ ಕ್ರಮದಿ ॥ ತರತಮದಿಂದಲಿ ಮೂಲ ರಾಮದೇ । ವರ ಮಂಡಿಸಿದರು ಮಂಟಪದೀ ॥ ೪ ॥ ರಾಮವಿಗ್ರಹವ ಕಾಣಲು ದಾಸರು । ಮೈಮರದರು ಅತಿಭಕ್ತಿಯಲೀ ॥ ಪ್ರೇಮದ ಭರದಲಿ ಪೊಗುಳುತನಲಿವರು । ರಾಮನ ಚರಿತೆ ಈ ತೆರದಲ್ಲೀ ॥ ೫ ॥ ॥ ೨೩ ॥

ಪದ, ರಾಗ–ಭೈರವಿ (ಆದಿತಾಳ).

*ರಾಮನ ನೋಡಿರೈ । ರಘುಜಲಲಾಮನ ಪಾಡಿರೈ ॥ ಪಂ ॥ ಶ್ರೀ ಮನೊಹರ ಅಜವ್ಯೋ ಮಾಳಕ ಸುರಸ್ತೋಮಾ । ನುತ ಗುಣಭೂಮಾ ॥ ಅನುಪಲ್ಲಾ ॥ ಧರಣಿ ಸುತೀಶನ ಚರಣ ತಳಾರುಣ ಹೊಳಲೊ । ಮಾವಿನ ತಳಿಲೊ । ಸುರುಚಿರಹಲ ಕುಲಶಾಬ್ಜ ಪತಾಕದ ಗೆರಿಯೊ । ಶುಭ ನಿಧಿಥೆರಿಯೋ । ಸುರತಟನಿಯು ಜನಕನ ನಖಸಾಲ್‌ಸಾಲ್ ಬೆರಳೊ । ವನರುಹ ದರಳೊ ॥ ಪೆರಡು ಎರಡು ಹೊಂಬೆರಡು ಹಿಂಬಡ ಜಂಘೆಜಾನೋ । ದರ್ಪಣ ವೇನೊ ॥ ೧ ॥ ಶ್ರೀರಮಣನ ಶ್ರಿಂಗಾರ ಸುಪೇರೂರುಗಳೊ । ಕದಳಿ ಮರಗಳೊ । ಶೌರಿಜ ಘನಸುಸಿತಂಬದಿ ಪಲಿಪಾಂಬರವೊ । ಅರುಣಾಂಬರವೋ ।

---

* ಈ ಪದವು ಗುರು ಗೋಪಾಲರಾಯರು ರಚಿಸಿದ್ದು. ಆದರೆ, ಈ ಚರಿತ್ರೆ ಕರ್ತೃರು, ಕೆಲವು ಗೌಪ್ಯ ಕಾರಣದಿಂದ ಈ ಚರಿತ್ರೆಯಲ್ಲಿ ಸೇರಿಸಿರುವರು.

ಚಾರುಮೇಖಳ ಕಾಂತಿಗಳಿಂದೊಪ್ಪುವ ಕಟಿಸ್ಥಳವೊ ಸಿಂಹದ ನಿಲವೊ ॥ ಮೂರುವಳಿಯು ನಾಭಿಯು ಸುರೋಮಾವಳಿಯೊ । ತ್ರಿವೇಣಿಸುಳಿಯೋ ॥ ೨ ॥ ಕರುಣನಿಧಿಯು ವಕ್ಷಸ್ಥಳ ವಜ್ರದ ಖಣಿಯೊ । ರಮೆಯರ ಮನಿಯೊ । ಪರಿ ಪರಿಹಾರ ತ್ರಿರೇಖಾಂಕಿತ ಕಂಧರವೊ । ಸುಂದರದರವೊ । ಅರಿಭಂಜನ ಸನ್ನುತ ಭುಜಬಾಹುದಂಡಗಳೊ । ಕರಿಶುಂಡಗಳೊ ॥ ಕರತಳಾಂಗುಲಿನಖ ಉರದಲಿ ಕೌಂಸ್ತುಭಮಣಿಯೊ । ಉದಿತ ದ್ಯುಮಣಿಯೋ ॥ ೩ ॥ ಚಂದಿರ ಬಿಂಬ ಸುಮುಖ ಚುಬಕದ ದ್ಯುತಿಯೊ । ಪವಲದಲತಿಯೊ । ಮಂದಸ್ಮಿತ ಮಾಯಾವಿವದನ । ಪಲ್ಲುಗಳೊ । ಮಲ್ಲಿಗಿಮುಗುಳೋ । ಸೌಂದರ್ಯದರಸ ನಿಮ್ನ ಸುನಾಸದಕೊನಿಯೋ । ಸಂಪಿಗಿತೆನಿಯೋ । ಇಂದಿರೇಶನ ಕೃಪಾವ ಲೋಕನ ನಯನಗಳೋ । ಪಂಕಜಯುಗಳೋ ॥ ೪ ॥ ಖಗರೂಢನ ಶಿರಿ ಮೊಗದ ಕಪೋಲ್ಗಳಶಿರಿಯೊ । ಕೂರ್ಮದಮರಿಯೋ । ನಗಧರನನುಪಮ ಕರ್ಣಕುಂಡಲಗಳ ದ್ಯುತಿಯೊ । ಇನಶತಿ ತತಿಯೋ । ಜಗನ್ಮೋಹನ ಜನ ಕನ ಭ್ರೂವಿಲಾಸಗಳೋ । ನಿಂಬದಯುಗಳೋ ॥ ಮೃಗಮದ ತಿಗುರಿ ನಿಂದೊಪ್ಪುವ ಶೋಭನ ಫಣಿಯೊ ಅರಶತಿಗೆಣಿಯೋ ॥ ೫ ॥ ಕುಂಡಲಿಶಯು ನನ ಕುಟಲಾಳಕಗಳ ವಲವೊ । ಭೃಂಗದ ಕುಲವೊ । ಪಂಡಿತ ಪ್ರೀಯುನ ಮಂಡೆಯುಲೊಪ್ಪುವ ಮುಕುಟವೊ । ರತ್ನಕಟಕವೊ ॥ ಚಂಡವಿಕ್ರಮುಶರತೂಣಿ ಕೋದಂಡಪಾಣಿ । ಗುಣಗಣಶ್ರೇಣಿ । ಚಂಡೀಶನ ಕೋದಂಡಕಾಂಡ ಖಂಡ್ರಿ ಸಿದಾ । ಖಳರ ದಂಡಿಸಿದಾ ॥ ೬ ॥ ಗುರುಮುಖ ವಿಘ್ನಾಚರಿಸಿದ ಖಳರ । ಶಿಕ್ಷಿ ಸಿದ । ಕೃತು ರಕ್ಷಿಸಿದ । ಗುರುವರದೇಂದ್ರುರ ಕರಕಮುಲಾರ್ಚಿತ ಚರಣಾ । ಮಾರುತಿ ಶರಣಾ । ಗುರು ಕರುಣದಿ ತನ್ನನು ನಂಬಲು ಅಘಕಡಿವಾ । ರಿಪು ಗಳ ಬಡಿವಾ ॥ ಗುರು ಗೋಪಾಲ ವಿಠಲರಾಮಾ ನಮ್ಮ । ನು ಕಾವಾ ಅತಿ ಮುದವೀವಾ ॥ ೭ ॥ ॥ ೩೦ ॥

(ಭಾಮಿನಿಷಟ್ಪದಿ.)

ಚಲುವ ರಘುರಾಮುನರ್ಚನೆ । ಹಲವು ವಿಧದಲಿ ಗೈದು ಮುನಿವರ । ಸಲಿಸಿದರು ನೈವೇದ್ಯ ಆರತಿ ಸಕಲ ಪೂಜೆಯನೂ ॥ ಕಲಿಮಲವ ಕಳವಂಥ ತೀರ್ಥವ । ಕೊಳುತ ಬ್ರಾಹ್ಮಣ ಜನರು ಮುದದಿಂ । ದಲಿ ಸುಭೋಜನವಾ

ಡಿದರು ಶ್ರೀಗಳ ಪ್ರಸಾದವನೂ ॥ ೧ ॥ ಇಂತು ಕಾರ್ಯವ ತೀರ್ದ ಬಳಿಕೇ। ಕಾಂತ ಸ್ಥಳದಲಿ ಗುರುವರು ಶ್ರೀ। ಕಾಂತನನು ಸ್ಮರಿಸುತ್ತ ಆನಂದದಲಿ ಕುಳಿತಿರಲೂ ॥ ಶಾಂತವಾದಾ ಸಮಯದಲಿ। ಏಕಾಂತದಲಿ ಹರಿದಾಸ ವರ್ಯರು। ಇಂತು ಪ್ರಾರ್ಥಿಸುತಿಹರು ಮನಸಿನ ಚಿಂತೆಯನು ತೊರದೂ ॥ ೨ ॥ ॥ ೩೨ ॥

ಪದ, ರಾಗ–ಪೂರ್ವಿ (ಏಕತಾಳ).

ಗುರುರಾಯಾ ಗುರುರಾಯಾ। ಸ್ಮರಿಪ ಭಕತರುದ್ಧರಿಪ ಸಮರ್ಥಾ ॥ ಪಲ್ಲ ॥ ತಂದೆ ನಿಮ್ಮಯ ದಯ। ದಿಂದಲೇ ಈ ಸುಖ ॥ ಬಂದಿಹದೆನ್ನಗೆ। ಸಂದೇಹವಿಲ್ಲವೋ ॥ ೧ ॥ ಬಡವನು ನಾಖರೆ। ಕಡು ಕರುಣಿಯೆ ನಿ। ನ್ನಡಿಗಳಿಗೆಲ್ಲವು। ತಡೆಯದೆ ಕೊಡುವೆನು ॥ ೨ ॥ ಮನೆಧನ ಧಾನ್ಯವಾ। ಹನ ವಸನಗಳನು ॥ ಅನುಮಾನಿಸದಲೆ। ನಿನಗರ್ಪಿಸುವೆನು ॥ ೩ ॥ ಕಡೆಯ ಮಾತಿದು ಎ। ನ್ನೊಡೆಯನೆಲಾಲಿಸು ॥ ಪೊಡಪಿವನ ಪದದಿ। ದೃಢಭಕುತಿಯ ಕೊಡು ॥ ೪ ॥ ವೃರದೇಂದ್ರನೆ ನೀ। ಸ್ವರುಷವಾಗಲು ಶಿರಿ ॥ ವರದೇಶ ವಿಠಲನು। ಕರುಣಿಪ ಸತ್ಯಾ ॥ ೫ ॥ ॥ ೩೭ ॥

(ಗದ್ಯ.)

ಈ ತೆರದಿ ಪ್ರಾರ್ಥಿಸಲು ದಾಸವರ್ಯರು ನಯದಿ। ದಾತ ವರದೇಂದ್ರಾರ್ಯನ ಸುನಗುತ ಮನದೊಳಗೆ। ಪ್ರೀತಿಯಿಂದಲಿ ನುಡಿದನೀಪರಿಯಲತಿ ಹರುಷ। ವಾ ತೋರುತಾಕ್ಷಣದಲೀ ॥ ೧ ॥ ॥ ೩೮ ॥

ಪದ, ರಾಗ–ಭೂಪಾಳಿ (ಆಟತಾಳ).

ಕೊಡುವದು ಗುರುಕಾಣಿಕಿಯನೂ। ತಡಿಯದೇ ಪ್ರಾಣೇಶ ದಾಸವರ್ಯನೆ ನೀನು ॥ ಪಲ್ಲ ॥ ಮನೆಯೊಳ್ಲೆ ಧನವಾ। ಹನ ವಸನಗಳೊಲ್ಲೆ ॥ ಅನುಮಾನಿಸದಲೆ। ಮ್ಮನಸಿನೊಳಿದ್ದದ್ದು ॥ ೧ ॥ ಬಣವಿದೊಡ್ಡಿಯ ಕೃಷ್ಣಾ। ರ್ಪಣವೆಂದು ಕೊಡಲು ॥ ರಾಮನ ದಯ ನಿಮ್ಮಲ್ಲಿ। ಘನವಾಗಿ ಆಹದೂ ॥ ೨ ॥ ಸೋಜಿಗವಲ್ಲವು। ಪೂಜೀತವಾಹದು ॥ ನೈಜವಾಗೀಸ್ಥಳ। ನೀಜವದಿಂದಲಿ ॥ ೩ ॥ ಬೇಡಿದಾಗಲೆ ತಡ। ಮಾಡದೆ ಸ್ವಾಧೀನ ॥ ಮಾಡುವದೆಮ್ಮಗೆ। ನೀಡಿದ ಸ್ಥಳ

ವನೂ ॥ ೪ ॥ ವರದೇಶ ವಿರಲನು । ಸರುವ ದೇವರೊಡ ॥ ನಿರುತಿಹನೀ ಸ್ಥಳ । ಪರಮ ಪವಿತ್ರವು ॥ ೫ ॥ ॥ ೪೩ ॥

(ಕಂದ.)

ಮುನಿವರರ ಹೃದ್ಗತವ ತಿಳಿದು । ಸನುಮತದಿ ಸಂಕಲ್ಪದೊಡನೆ ಕೃಷ್ಣಾ ॥ ರ್ಪಣವೆನುತ ಇತ್ತರುದಾನಂ । ಜನಕಾದುದಾಶ್ಚರ್ಯವೀದಾನ ದಿಂ ॥ ೧ ॥ ॥ ೪೪ ॥

(ಆರ್ಯವೃತ್ತ.)

ಧನ್ಯ ಧನ್ಯ ದಾಸಾರ್ಯರೆ ನಿಮ್ಮಯ । ಪುಣ್ಯಕ ಸರಿಗಾಣೆನು ಜಗದೀ ॥ ಮಾನ್ಯರೆನಿಸಿದಿರಿ ನಿಮ್ಮ ವಂಶಪಾ । ವನ್ನವಾಯಿತಿಂದಿನ ದಿನದೀ ॥ ೧ ॥ ದಾನದ ಮರ್ಮವನರಿಯದೆ ಅಚ್ಚರ । ಕ್ಷೋಣಿಯು ಜನಕಾದದು ಬಹಳಾ ॥ ಜಾನಕಿಪತಿ ಕೆಲಕಾಲದನಂತರ । ತಾನೆ ತೋರುವನು ಜಗ ಕೆಲ್ಲಾ ॥ ೨ ॥ ಇನಿತು ಪೇಳಿ ಸಂಶೇವಿತರಾಗುತ । ಮುನಿಗಳು ತೆರಳಿದ ರ್ಥರುಷದಲೀ ॥ ಪುಣೆಯ ಶೇರಿದರು ದುರ್ವಾದಿಯು ಮತ । ವನು ದಿಗ್ವಿಜ ಯಿಪ ಇಚ್ಛೆಯಲೀ ॥ ೩ ॥ ರಾಮುಶಾಸ್ತ್ರಿ ಎಂಬಾ ಮಹವಾದಿಯು । ತಾಮದ ಗಜದಂತಿರುತಿಹನೂ ॥ ಶ್ರೀಮಂತರ ಆಶ್ರಯದಿ ತನ್ನ ಸರಿ । ಭೂಮಿಯೊಳಿ ಲ್ಲೆಂದರಿತಿಹನೂ ॥ ೪ ॥ ವರದೇಂದ್ರರು ಬಂದಿರುವ ವಾರ್ತೆಯನು । ಅರಿತು ಅರಸು ಕರತರಿಸಿದನೂ ॥ ಮರಿಯಾದಿಯು ಪೂರ್ವಕದಿ ಅವರ ತ । ನ್ನರ ಮಂದಿರದಲ್ಲಿರಸಿದನೂ ॥ ೫ ॥ ಮುನಿಗಳ ಹೃದ್ಗತ ತಿಳದು ಶಾಸ್ತ್ರಿಗಳ । ಮನ ಸಿನ ಭಾವ ತಿಳುಹಿಸೆಂದಾ ॥ ಪಣದಿಂದಲೆ ವಾದವನು ಮಾಡುವೆವು । ಅನು ಮಾನವು ಯಿದಕಿಲ್ಲೆಂದಾ ॥ ೬ ॥ ಶಾಸ್ತ್ರಿಯು ಭಾವವ ಮುನಿಗಳ ಸಮು ಖದಿ । ಸ್ತೋತ್ರ ಮಾಡಿ ತಿಳುಹಿದನಾಗಾ ॥ ಶಾಸ್ತ್ರವಿಚಾರ ಪ್ರತಿಜ್ಞೆಯೊಡನೆ ಈ । ಶಾಸ್ತ್ರಿಯೊಡನೆ ಮಾಡುವದೀಗಾ ॥ ೭ ॥ ॥ ೫೧ ॥

ಪದ, ರಾಗ–ರೇಗುಪ್ತಿ (ತ್ರಿಪುಡೆತಾಳ).

ಶಪಥವ ಮಾಡುವೆ ವೀಪರಿ ಜನರೆಲ್ಲಾ ಕೇಳಿರೆಲ್ಲಾ ॥ ಸುಪಥವ ಶಾಸ್ತ್ರದಿ ಸಾಧಿಸಿ ಕೊಡೆವೆವು ಸಂದೇಹವಿನಿತಿಲ್ಲಾ ॥ ಪ॥ ಸಕಲ ಶ್ರುತಿಸ್ಮೃತಿ

ಸಿದ್ಧಾಂತವಿದೆ ಸತ್ಯಾ ಕೇಳಿರೆಲ್ಲಾ ॥ ಯುಕುತಿಗೆ ಅನುಕೂಲವಾದ ತತ್ವ ವಿದು ಸಟಯು ಅಲ್ಲಾ ॥ ೧ ॥ ಹರಿಯೆ ಸರ್ವೋತ್ತುಮಾ ಸಾಕಾರ ಸ್ವಾತಂತ್ರಾ ಸುಗುಣ ಪೂರ್ಣ ॥ ಶಿರಿ ಅಜಭವ ಮುಖ ಸುರರು ತರತಮದಿಂದ ಗುಣದಿ ನ್ಯೂನಾ ॥ ೨ ॥ ಹರಿಯೇ ಜಗತ್ಕರ್ತಾ । ಹರಿಯೆ ಮುಕ್ತಿದಾತಾ ಸರ್ವಾಧೀಶಾ ॥ ಸುರತತಿ ಹರಿಯು ಆಧೀನರು ನಿತ್ಯದಿ ಅವನ ದಾಸಾ ॥ ೩ ॥ ಪಂಚಭೇದವು ಪ್ರಾಪಂಚವು ಸತ್ಯವು ನಿತ್ಯದಲ್ಲೀ ॥ ಪಂಚಿಕಿಯಲಿ ಶಿದ್ಧವಾದ ತತ್ವಾ ಮಧ್ವಶಾಸ್ತ್ರದಲ್ಲೀ ॥ ೪ ॥ ಮಧ್ವಶಾಸ್ತ್ರವೆ ಶಾಸ್ತ್ರಾ ಮಧ್ವರಾಯರೆ ಗುರು ಸತ್ಯಾ ಸತ್ಯಾ ॥ ಅದ್ವೈತ ಶಾಸ್ತ್ರವು ಶುದ್ಧತಾಮಸವದು ಮಿಥ್ಯಾ ಮಿಥ್ಯಾ ॥ ೫ ॥ ಈ ಸುವಾದದಿ ಪರಾಜೀತರಾದರೆ ನಾವು ಕೇಳಿ ಬ್ಯಾಗ ॥ ಲೇ ಸುವೈಭವ ಸನ್ಯಾಸ ಸಹಿತವಾಗೀ ತ್ಯಜಿಪೆವೀಗಾ ॥ ೬ ॥ ವರದೇಶ ವಿಠಲನ ಕರುಣದಿ ದುರ್ಮತ ಮೂಲವನ್ನೂ ॥ ಹರಿದುಬಿಡುವೆವು ವಾದಿಯು ಬರಹೇಳು ಸಭೆಯೊಳಿನ್ನೂ ॥ ೭ ॥ ॥ ೫೮ ॥

(ಆರ್ಯಾವೃತ್ತ)

ಕೇಳಿ ಶಪಥವನು ರಾಮುಶಾಸ್ತ್ರಿ ಬಹು । ತಾಳುತ ಕೋಪವ ಮನದಲ್ಲೀ ॥ ಪೇಳುವನೀಪರಿ ನೃಪತಿಯು ಸಭೆಯೊಳು । ಆಲಿಸುವಂದದಿ ಜನರಲ್ಲೀ ॥ ೧ ॥ ಲೇಸು ಲೇಸು ನಾ ಸೋತರೆ ನೃಪವರ । ಈ ಸಂಸ್ಥಾನವ ತ್ಯೈಜಿಸುವೆನೂ ॥ ದೇಶಾಂತರದಲಿ ವಾಸಮಾಡುತಲಿ । ಶೇಷಾಯುಷ್ಯವನೀಗೂವೆನು ॥ ೨ ॥ ಸಟಯಾತಕೆ ನಾ ಸೋತರೆ ಮುನಿಗಳ । ಮಠವ ಮಾಡಿಸೆ ಮ್ಮಯ ಗೃಹವಾ ॥ ಥಿಟತನದಲಿ ಧೂರ್ಜಟಿಯು ಕರುಣದಿಂ । ನಟಸುವೆನೀ ಮುನಿಗಳ ಬಲವಾ ॥ ೩ ॥ ॥ ೬೧ ॥

ಪದ, ರಾಗ—ಶಂಕರಾಭರಣ (ಏಕತಾಳ).

ನಡಸಿದ ಶಾಸ್ತ್ರಿಯು ವಾದವನು । ಮುನಿಯು ತಡಿಯುದೆ ಜೈಸಿದ ವಾದಿಯುನೂ ॥ ಪಂ ॥ ಜೀವೇಶರೈಕ್ಯವ ಪೇಳಿದಾ । ಮುನಿಯು ಜೀವೆಶ್ವರರ ಭೇದಾ ಸ್ಥಾಪಿಸಿದಾ ॥ ೧ ॥ ಜಗನ್ಮಿಥ್ಯಾವೆಂದು ನುಡಿದಾನು । ಮುನಿಯು ಜಗತ್ಸತ್ಯಾ ಸಿದ್ಧಮಾಡಿದನೂ ॥ ೨ ॥ ತತ್ವ ಮಸೀತ್ಯಾದಿ ಶೃತಿಗಳನು

ಮುನಿಯು । ಯುಕ್ತಿಲಿ ದ್ವೈತಾರ್ಥ ಪೇಳಿದನೂ ॥ ೩ ॥ ಆವಾವ ವಾಕ್ಯವ ಪಿಡಿವಾನು ಮುನಿಯು । ಯಾವತ್ತು ದ್ವೈತಾರ್ಥ ನುಡಿವಾನೂ ॥ ೪ ॥ ವರದೇಶ ವಿಠಲನ ಕರುಣದೀ । ನಿರುತ್ತರ ಗೈದಾ ವಾದಿಯ ವಾದದೀ ॥ ೫ ॥ ॥ ೬೬ ॥

(ವಾರ್ಧಿಕಷಟ್ಪದಿ.)

ಪೃಥ್ವಿಪನ ಸಭೆಯೊಳಗೆ ಹತ್ತೇಳು ದಿವಸದಲಿ । ಶೃತಿಶಾಸ್ತ್ರ ಉಪ ನಿಷದ್ಗಳ ಸಾರಮಂ ಪೇಳಿ । ಪ್ರತಿವಾದಿಯುಂ ನಿರುತ್ತರಗೈಸಿ ಶ್ರೀ ಮಧ್ವ ಮತವಸಂಸ್ಥಾಪಿಸಿದನೂ ॥ ಗತ ತೇಜನಾದ ಶಾಸ್ತ್ರಿಯ ಗೃಹವ ಪಣದಂತೆ । ಯತಿ ಶಿರೋಮಣಿಗಾಗಿ ಮಠವ ಸ್ಥಾಪಿಸಿ ವರಾ । ಜಿತನಾದ ಕಾರಣದಿ ಸಂಸ್ಥಾನವಂ ತ್ಯಜಿಸಿಪತಿತನೋಲ್ ಪೊರಮುಟ್ಟನೂ ॥ ೧ ॥ ॥ ೬೭ ॥

(ಆರ್ಯಾವೃತ್ತ.)

ರಾಮನ ಗೃಹ ಪೀಠಾಮಗಾಯ್ತು ಆ । ರಾಮಗೆ ಪೀಠಾಮವು ಆಯ್ತು ॥ ರಾಮಣಿಯಕ ಪುರದೀ ಮೆರದು ಮುನಿ । ಶ್ರೀಮಂತಗೆ ಸನುಮತ ವಾಯ್ತೂ ॥ ೧ ॥ ಆನಿ ಹಂಡೆ ವಸನಗಳೂ ದ್ರವ್ಯದ । ದಾನದಿ ನೃಪರನು ಮರಸಿದನೋ ॥ ಜ್ಞಾನ ಭಕುತಿ ವೈರಾಗ್ಯದಿ ವರಸರಿ । ಕ್ಷೋಣಿಯೊಳಗೆ ಯಿಲ್ಲೆನಿಸಿದನೊ ॥ ೨ ॥ ಅಬ್ದವು ವಿಶ್ವಾವಸು ಆಷಾಢದ । ಶುದ್ಧ ಷಷ್ಟಿ ಕುಜ ವಾರದಲೀ ॥ ಸಿದ್ಧಾಸನದಲಿ ಕುಳಿತನು ಮುನಿವರ । ಶುದ್ಧ ಸಮಾಧಿಯು ನಿಕ್ಕತಲೀ ॥ ೩ ॥ ಸಾಧನ ಬಹುವಿಧ ತೀರಿಸಿ ಮುನಿವರ । ಐದಿದ ಶ್ರೀಹರಿ ಯಾಲಯವಾ ॥ ಸಾಧುಸುಜನರನು ಪೊರಿಯಲು ಅಂಶದಿ । ಈ ಧರಿ ಯೊಳು ಚರಿಸುತಲಿರುವಾ ॥ ೪ ॥ ಕೆಲಕಾಲದ ನಂತರ ದಾಸಾರ್ಯರಿ । ಗೊಲಿದು ಪೇಳಿದನು ಸ್ವಪ್ನದಲೀ ॥ ತುಳಸಿ ರೂಪದಿಂದಲಿ ಬಣವಿಯು ತಳ । ದಲಿ ಬಂದಿರುವೆನು ಶೀಘ್ರದಲೀ ॥ ೫ ॥ ಗುಲಗುಂಜಿಯ ಮೊರಡಿ ಯಲಿ ಒಪ್ಪುತಿಹ । ಶಿಲೆಯನು ವೃಂದಾವನ ಮಾಡೀ ॥ ತುಳಸಿ ವೃಕ್ಷವಿಹ ಸ್ಥಳದಲಿ ಸ್ಥಾಪಿಸಿ । ಬಲು ಭಕುತಿಲಿ ಪೂಜೆಯು ಮಾಡೀ ॥ ೬ ॥ ಮುನಿ ಯಾಜ್ಞವ ಸನ್ಮದಲಿ ಮನ್ನಿಸಿ । ಬಣವಿಯ ತೆಗಸಿದರಾಕ್ಷಣದೀ ॥ ಮನುಜ

ನಳತಿ ಶ್ರೀ ತುಳಸಿ ವೃಕ್ಷವನು । ಜನರೆಲ್ಲರು ಕಂಡರು ಮುದದೀ ॥ ೭ ॥ ಕೆಲಕಾಲದಿ ಶ್ರೀ ತುಳಸಿಯ ಪೂಜಿಸಿ। ಗುಲಗುಂಜಿಯ ಮೊರಡಿಯುಲಿಂದಾ ॥ ತಿಲೆಯುನು ಮುನಿವರರಾಜ್ಞೆಯುಂದದಲಿ । ಬಲು ಸಂಭ್ರಮದಿಂದಲಿ ತಂದಾ ॥ ೮ ॥ ವೃಂದಾವನ ಸ್ಥಾಪಿಪ ಸಮಯದಿ ಭುವ। ನೇಂದ್ರರು ಜುಮಲಾಪುರ ದಿಂದಾ ॥ ನಂದದಿ ನರಹರಿ ಸಾಲಿಗ್ರಾಮವ । ನಂದು ಕಳುಹಿದರು ಮುದ ದಿಂದಾ ॥ ೯ ॥ ಅತಿ ಸಂಭ್ರಮದಲಿ ವೃಂದಾವನ ಸ್ಥಾ। ಪಿತವಾಯಿತು ಶಾಸ್ತ್ರೋಕ್ತಿಯುಲೀ ॥ ಮತಿವಂತರಿಗಾನಂದ ಖೇದ ದು । ರ್ಮತಿಗಳಿಗಾದದು ಮನದಲ್ಲೀ ॥ ೧೦ ॥ ಆ ತರುವಾಯದಿ ಪಾದುಕೆಗಳ ಮುನಿ। ತಾತವಕದಿ ಪುಣೆಯದಲಿಂದಾ ॥ ಪ್ರೀತಿಯಿಂದ ಸ್ವಪ್ನದಲಿ ಪೇಳಿ ನಿಜ। ದೂತರಿಂದ ತರಿ ಸಿದನಾಗಾ ॥ ೧೧ ॥ ॥ ೭೮ ॥

ಪದ, ರಾಗ–ಭೂಪಾಳಿ (ತ್ರಿಪುಡೆತಾಳ).

ವೃಂದಾವನದಿ ವರದೇಂದ್ರ ಮುನಿವರನು । ಬಂದಿಹನತಿ ಆನಂದಾ ದಿಂದಾ ॥ ಮಂದಜನಕ ಸುಖ। ತಂದುಕೊಡುವದಕೆ। ಮಂದಾರ ತರುವಿ ನೋಲ್ । ನಿಂದು ಪಾಲಿಪನಿತ್ಯಾ ॥ ಪಲ್ಲ ॥ ಗುರುವರನಿಗೆ ಕೀರ್ತಿ । ತರುವ ಉದ್ದೇಶದಿ । ಸರ್ವಜ್ಞ ಮೊದಲಾದ ಮುನಿವೃಂದವೂ ॥ ಹರಮುಖಸುರ ರೊಡಗೂಡಿ ಹರುಷದಿಂದಾ । ಶಿರಿ ಅರಸನು ತಾನೆಯಿರುವನೀ ಸ್ಥಳದಲ್ಲೀ ॥ ೧ ॥ ಸುತರು ಬೇಡುವರಿಗೆ ಸುತರ ಪಾಲಿಸುವ ಆ। ನತರಿಗೆ ಅಖಿಳ ಇಷ್ಟಾ ರ್ಥವನೂ । ಮತಿವಂತರಿಗೆ ಸದ್ಭಕುತಿ ಜ್ಞಾನ ವೈರಾಗ್ಯ । ಪ್ರತಿಪಾಲಿಸು ವನು ಸದ್ಗತಿ ಸಹ ನಿರುತದೀ ॥ ೨ ॥ ದುರುಳಜನಕ ದುಃಖಾಶರಣರಿಗೆ ಸುಖ । ಕರುಣಿಪನವರ ಯೋಗ್ಯತೆಯರಿತೂ ॥ ದುರಭಿಮಾನವ ಬಿಟ್ಟು ಗುರುಗಳ ಚರಣವ। ಸ್ಮರಿಸುವರನು ಪೊರವ ವರದೇಶ ವಿಠಲನೂ ॥ ೩ ॥ ॥ ೭೯ ॥

(ಆರ್ಯವೃತ್ತ.)

ಈ ಗುರುಗಳು ಇಲ್ಲಿಹ ಕಾರಣದಿಂ । ಸಾಗಿಬಹದು ಸಜ್ಜನವೃಂದಾ ॥ ಜಾಗು ಮಾಡದಲೆ ಯೋಗೀಶರ ಪದ। ಬಾಗಿ ಭಜಿಸುವರು ಮುದದಿಂದಾ ॥ ೧ ॥ ಗುರುವಾರದ ದಿವಸದಲಿ ಸಂಭ್ರಮದಿ । ಹರಿಭಕತರ ವೃಂದವು

ಕೂಡೀ । ಗುರುಗಳ ಪಾಲಕಿ ಶೇವಿಯು ಮಾಡುವ । ರ್ಥರುಷದಿ ಗುರುಗಳ ಕೊಂಡಾಡೀ ॥ ೨ ॥ ಪ್ರತಿ ವರುಷದ ಆಷಾಢ ಶುದ್ಧದಲಿ । ತಿಥಿ ಸಪ್ತಮಿ ಶುಭ ದಿವಸದಲೀ ॥ ಯತಿವರ ಬಹು ವಿಜೃಂಭಣೆಯಿಂದಲಿ । ರಥದಲಿ ಮೆರೆವನೀ ಸ್ಥಳದಲ್ಲೀ ॥ ೩ ॥ ಆರಾಧನಿಯಲಿ ಬಹು ದ್ವಿಜವೃಂದವು । ದೂರದೂರದಿಂದಲಿ ಬಹದೂ ॥ ಚಾರುತರದ ಸುಪುರಾಣವು ಬಹು ಶ್ರೃಂಗಾರದ ಗಾನವು ನಡೆಯುವದೂ ॥ ೪ ॥ ಗುರುಗಳ ಪಾದೋದಕವು ಪ್ರಸಾದವು । ಹರುಷದಿ ಕೊಳ್ಳುತ ಯಿಲ್ಲಿಂದಾ ॥ ವರದೇಶ ವಿಠಲನ ಸ್ಮರಿಸುತ ಎಲ್ಲರು । ತೆರಳುವರತಿ ಹರುಷದಲಿಂದಾ ॥ ೫ ॥ ॥ ೮೭ ॥

ರಾಗ-ಕಾಂಬೋಧಿ (ಅಟತಾಳ).

[ಅಷ್ಟಕ ಧಾಟಿ.]

ಆಲಿಸುವದು ಹರಿಭಕತರೂ ಗುರುಗಳ ಚಾರು । ಚರಿತೆ ಕೇಳಿ ಮೋದಿವರೂ ॥ ಪಲ್ಲ ॥ ಈ ಪರಿಯಲಿ ಗುರುವರದೇಂದ್ರಾ । ಸದ್ಗುಣ ಸಾಂದ್ರಾ । ವೃಂದಾವನದಲ್ಲಿ ನಿಂದಾ । ಆಪನ್ನ ಶರಣ... ಪೊರಿವನೂ । ಅಘ ತರಿವನೂ । ಇಷ್ಟಾರ್ಥಗರಿಯುವನೂ । ತಾಪತ್ರಯಾದಿ ದೋಷಗಳೆಲ್ಲಾ । ತರಿವನು ಖುಲ್ಲಾ । ಮಾನವರನೆಂದೂ ವಲ್ಲಾ । ಈ ಪೊಡವಿಯಲಿ ಎಮ್ಮಯ ಗುರೂ । ಯಿಗೆ ಸರಿ ಯಾರು । ಇಲ್ಲವೆಲ್ಲಿ ನೋಡಿದರೂ ॥ ೧ ॥ ಭೂತಪ್ರೇತ ಪಿಶಾಚಿಯ ಪೀಡಾ । ಕಳಿವನು ಗಾಢಾ । ದುರ್ಜನರನೆಂದು ನೋಡಾ ॥ ಪ್ರೀತನಾಗುವ ತನ್ನ ಪಾಡಲೂ । ಸೇವೆ ಮಾಡಲೂ । ತನುಮನವನೀಡಾಲು । ತಾತವಕದಿ ಭಕ್ತ ಜನರನೂ । ಕರ ಪಿಡಿವನೂ । ಮುಕುತಿಯ ಕೊಡುವಾನೂ । ಈತನ ಚರಿತೆಯ ಕೇಳ್ವರೂ । ನೆರೆ ಬಾಳ್ವರೂ । ಭವವನಧಿ ದಾಟುವರೂ ॥ ೨ ॥ ವರದೇಂದ್ರರ ಸುಚರಿತೆಯನು । ಶ್ರೀಹರಿಯು ತಾನು । ನುಡಿದು ನುಡಿಸಿದನಿದನೂ । ಅರುಹಿದ ಶಕ್ತ್ಯಾನುಸಾರದೀ । ನಿರ್ಹಂಕಾರದಿ । ಜ್ಞಾನಿಗಳು ಕೇಳಿ, ಮುದದೀ । ಇರುವ ದೋಷವು ಕ್ಷಮಿಸುವದೆಂದೂ । ಪ್ರಾರ್ಥಿವೆನಿಂದೂ । ಬಹು ದೋಷಿ ನಾನೆಂದೂ । ವರದೇಶ ವಿಠಲಾನು ಒಲಿಯಾಲಿ । ಪ್ರೀತನಾಗಲೀ । ಜ್ಞಾನಭಕುತಿ ಪಾಲಿಸಲೀ ॥ ೩ ॥ ॥ ೮೮ ॥

## ಮಂಗಳಾರುತಿ ಪದ.

ರಾಗ–ಶಂಕರಾಭರಣ (ತಾಳ).

ಜಯು ಗುರು ವರದೇಂದ್ರಾ । ಜಯು ಶುಭಗುಣ ಸಾಂದ್ರಾ ॥ ಜಯು ಮಂಗಳ ಭಕ್ತಾ ಭಯುನಿವಾರಕನೇ ॥ ಪಲ್ಲ ॥ ವಸುಧೇಂದ್ರ ಕರಜಾತ । ವಸುಧಿ ಯೊಳಗಖ್ಯಾತ । ಬಿಶಿಜನಾಭನ ದೂತಾ । ಅಸಮ ಮೌನೀಶಾ ॥ ೧ ॥ ಗಂಗಾ ಪಿತನ ಪಾದ । ಭೃಂಗನೆ ನಿರುತಾ ॥ ನಂಗತಾಪರಹಿತ । ಮಂಗಳಚರಿತಾ ॥ ೨ ॥ ಅಲವ ಬೋಧಸುಮತ । ಜಲಧಿ ಚಂದ್ರಮನೇ ॥ ಕಲುಷವಿದೂರ ಕಮಂ । ಡುಲ ದಂಡಧಾರಾ ॥ ೩ ॥ ಪುಣ್ಯಮಂದಿರವಾಸಾ । ಸನ್ನುತ ಜನ ಪೋಷಾ ॥ ಘನ್ನ ಮಹಿಮ ಕಾ । ರುಣ್ಯಸಾಗರನೇ ॥ ೪ ॥ ವರದೇಶ ವಿಠಲನ । ಚರಣವ ಸ್ಮರಿಸುವ ॥ ಪರಮುಸದ್ಭಕುತಿಯು । ಕರುಣಿಪುದೆಮಗೇ ॥ ೫ ॥ ಅಂತೂ ಪದ್ಯ ॥ ೯೪ ॥ ಶ್ರೀ ಗುರು ಮಧ್ವೇಶಾರ್ಪಣಮುಸ್ತು ॥

ಇತಿ ಶ್ರೀ ವರದೇಂದ್ರಾರ್ಯ ಚರಿತಾನು
ವರ್ಣನಕಥಾ ಸಂಪೂರ್ಣ ಮಗಮತ್ ॥

**ಮಂಗಳಂ ! ಮಂಗಳಂ !! ಮಂಗಳಂ !!!**

ಶ್ರೀ ಮದ್ವರದೇಂದ್ರ ಗುರುಣಾಂತರ್ಗತ ಶ್ರೀ ಭಾರತೀರಮಣ ಮುಖ್ಯ ಪ್ರಾಣಾಂತರ್ಗತ ಶ್ರೀ ಸೀತಾಪತೆ ಶ್ರೀ ರಾಮಚಂದ್ರ ಚರಣಾರವಿಂದಯೊರ ರ್ಪಿತಾ ॥ ಶ್ರೀ ಮಧ್ವೇಶಾರ್ಪಣಮುಸ್ತು ॥

ಶಹಲಿವಾನ ಶಖೆ ೧೮೪೦ನೇ ಕಾಲಾಯುಕ್ತಿ ನಾಮ ಸಂ । ಆಷಾಢ ಶು। ೨ ಸೋಮವಾರ ದಿವಸ ಲಿಂಗಸೂಗೂರು ಕ್ಷೇತ್ರ ಶ್ರೀ ವರದೇಂದ್ರ ಗುರುರಾಜರವರ ಸನ್ನಿಧಿಯಲ್ಲಿ ಕೆಲ್ಲೂರ ಕುಲಕರ್ಣಿ ಹನುಮಂತರಾಯನ ತನುಜಾತ ಸ್ವಾಮಿಯ ಹಸ್ತಾಕ್ಷರದಿಂದಾ ಶ್ರೀ ಗುರು ಜಗನ್ನಾಥ ದಾಸ ರಾಯರ ಅನುಜ್ಞೆಯಿಂದ ಶ್ರೀಹರಿ ವಾಯುಗಳು ಪ್ರೇರಿಸಿ ಬರೆಸಿದ ಈ ಚರಿತೆಯು ಸಂಪೂರ್ಣವಾದದು.

॥ ಶ್ರೀ ಗುರುರಾಜಾಂತರ್ಗತ ಶ್ರೀ ಮಧ್ವೇಶಾರ್ಪಣಮುಸ್ತು ॥

**ಶ್ರೀ ಶ್ರೀ ಶ್ರೀ**

